**TRAVEL PAGE**

# ಪ್ರವಾಸ 2015

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ

**Apr 27**

### ಕಾಶಿ - ನೇಪಾಳ : 16 ದಿನಗಳು

ಕಾಶಿ, ಕಠ್ಮಂಡು, ಭಕ್ತಪುರ್, ಪಟಾನ್, ಪೋಖ್ರಾ, ಮುಕ್ತಿನಾಥ್ (Optional), ಮನೋಕಾಮನ, ಘೋರಖ್‌ಪುರ್

**Apr 05,17**

### ಶಕ್ತಿಪೀಠ ಮನಾಲಿ ಸ್ಪೆಷಲ್: 18 ದಿನಗಳು

ವಾಘಾ ಬಾರ್ಡರ್ (ಇಂಡೋ-ಪಾಕ್ ಬಾರ್ಡರ್), ಅಮೃತ್‌ಸರ್, ವೈಷ್ಣವೀದೇವಿ, ಚಾಮುಂಡ, ಖಾಂಘ್ರಾ, ಚಿಂತಪೂರ್ಣಿ, ಜ್ವಾಲಾಮುಖಿ, ಬೈಜ್‌ನಾಥ್, ಕುಲು-ಮನಾಲಿ, ವಶಿಷ್ಠ, ರೋತಾಂಗ್ ಪಾಸ್ (Optional), ನೈನಾದೇವಿ, ಕುಫ್ರಿ, ಸಿಮ್ಲಾ, ಚಂಡೀಘರ್, ಕುರುಕ್ಷೇತ್ರ, ನವದೆಹಲಿ

**Apr 29**

### ಕೋಲ್ಕತ್ತಾ - ಡಾರ್ಜಿಲಿಂಗ್ : 16 ದಿನಗಳು

ಡಾರ್ಜಿಲಿಂಗ್, ಗ್ಯಾಂಗ್‌ಟಕ್, ಸಿಲಿಗುರಿ, ಕೋಲ್ಕತ್ತಾ, ಪೂರಿ, ಕೊನಾರ್ಕ್, ಚಿಲ್ಕ ಲೇಕ್, ಭುವನೇಶ್ವರ್

**Apr 25**

### ತೀರ್ಥ ಯಾತ್ರಾ : 22 ದಿನಗಳು

ಆಗ್ರಾ, ಮಥುರ, ಬೃಂದಾವನ, ಅಲಹಾಬಾದ್, ಗಯಾ, ಬುದ್ದಗಯಾ, ಕಾಶಿ, ಸಾರಾನಾಥ್, ಅಯೋಧ್ಯಾ, ಹರಿದ್ವಾರ, ಗೌರೀಕುಂಡ, ಕೇದಾರನಾಥ್, ತ್ರಿಯುಗಿ (Optional), ಮಾನಾ, ವ್ಯಾಸ ಗುಹ, ಗಣೇಶ ಗುಹ, ಕೇಶವ ಪ್ರಯಾಗ್, ಬದರಿನಾಥ್, ಋಷಿಕೇಶ್, ನವದೆಹಲಿ

**May 08**

### ಚಾರೋಧಾಮ್ - ಕಾಶಿ - ಗಯಾ : 26 ದಿನಗಳು

ಹರಿದ್ವಾರ, ಯಮುನೋತ್ರಿ, ಗಂಗೋತ್ರಿ, ಉತ್ತರಕಾಶಿ, ಕೇದಾರ, ತ್ರಿಯುಗಿ (Optional), ಮಾನಾ, ವ್ಯಾಸ ಗುಹ, ಗಣೇಶ ಗುಹ, ಕೇಶವ ಪ್ರಯಾಗ್, ಬದರಿ, ಋಷಿಕೇಶ್, ನವದೆಹಲಿ, ಅಲಹಾಬಾದ್, ಅಯೋಧ್ಯಾ, ಸಾರಾನಾಥ್, ಗಯಾ, ಬುದ್ದಗಯಾ, ಕಾಶಿ

**June 28**

### ಅಮರನಾಥ್ - ವೈಷ್ಣವಿ ದೇವಿ : 19 ದಿನಗಳು

ಅಠ್ಠಾರಿ ಬಾರ್ಡರ್, ಅಮೃತ್‌ಸರ್, ವೈಷ್ಣವೀದೇವಿ, ಅಮರನಾಥ್, ಗುಲ್ಮಾರ್ಗ್, ಶ್ರೀನಗರ (ಕಾಶ್ಮೀರ್), ಕುರುಕ್ಷೇತ್ರ, ನವದೆಹಲಿ

**Mar 12**

### ಮಿನಿ ಆಂಧ್ರ : 05 ದಿನಗಳು

ಮಂತ್ರಾಲಯ, ಶ್ರೀಶೈಲ, ಮಹಾನಂದಿ, ಅಹೋಬಿಲಂ (ನವನರಸಿಂಹ)

**May June July Aug**

### ಕೈಲಾಸ ಪರ್ವತ ಮತ್ತು ಮಾನಸ ಸರೋವರ : 14 ದಿನಗಳು




# ಶ್ರೀ ಹನ್ಸಾ ಟ್ರಾವೆಲ್ಸ್

# SHRI HANSAA TRAVELS

**RECOGNISED BY DEPARTMENT OF TOURISM, GOVT. OF KARNATAKA**

No. 640, 40th Cross (Near Prabha Eye Clinic), 8th Block, Jayanagar, Bangalore - 560 070.

☎: (080) 26543891 / 26643276 Mobile : (0) 9341415612 / 9341215612

e-mail : hansaatravels@gmail.com web : www.hansaatravels.com

ವ್ಯವಸ್ಥಾಪಕ ಸಂಪಾದಕರು

*ಸ್ವಾಮಿ ಮುಕ್ತಿದಾನಂದ*

ಸಂಪಾದಕರು

*ಸ್ವಾಮಿ ಜ್ಞಾನಯೋಗಾನಂದ*

ನೆರವು:

*ಆರ್. ಎಸ್. ಪೂರ್ಣಾನಂದ*

*ಡಾ. ಕೆ. ಎಲ್. ಪ್ರಸನ್ನಾಕ್ಷಿ*

*ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ

*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

ಮುದ್ರಣ

*ಮಯೂರ್ ಗ್ರಾಫಿಕ್ಸ್, ಬೆಂಗಳೂರು*



E-mail:

vivekaprabha@hotmail.com

kannada.vivekaprabha@gmail.com

Website: vivekaprabha.net

ಫೋನ್ : 9481533505


ಮುಖಪುಟ:

ಶ್ರೀಚೈತನ್ಯ ಮಹಾಪ್ರಭು

ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– *ಸ್ವಾಮಿ ವಿವೇಕಾನಂದ*

ಚಂದಾ ವಿವರ

ಬಿಡಿ ಪ್ರತಿ : ₹ 14

ವಾರ್ಷಿಕ : ₹ 140

ಮೂರು ವರ್ಷ : ₹ 375

ಆಜೀವ (25 ವರ್ಷ): ₹ 3,000

ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)

ವಾರ್ಷಿಕ : $ 20; ಮೂರು ವರ್ಷ : $ 60

ಆಜೀವ (25ವರ್ಷ): $ 300

ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.


ಮಾರ್ಚ್-2015 ಸಂಪುಟ 16 ಸಂಚಿಕೆ 03




# ವಿವೇಕ ಪ್ರಭ

ಪರಿವಿಡಿ



''ಶುಕನಂತೆ ರಾಮನೂ ಉನ್ನತ ಜ್ಞಾನವನ್ನು ಪಡೆದುಕೊಂಡಿದ್ದಾನೆ. ಅವನು ನಿಜವಾಗಿಯೂ ಮುಕ್ತಜೀವಿ. ಅವನಲ್ಲಿ ಕಂಡುಬರುತ್ತಿರುವ ಲಕ್ಷಣಗಳೆಲ್ಲವೂ ಅದನ್ನೇ ಸಾಬೀತುಪಡಿಸುತ್ತಿವೆ. ...





ಪ್ರಾರ್ಥನೆ

# ಶ್ರೀಚೈತನ್ಯದೇವ ವಂದನಾ



**ಯದದ್ವೈತಂ ಬ್ರಹ್ಮೋಪನಿಷದಿ ಯದಪ್ಯಸ್ಯ ತನುಭಾ**
**ಯ ಆತ್ಮಾಂತರ್ಯಾಮೀ ಪುರುಷ ಇತಿ ಸೋಽಸ್ಯಾಂಶ ವಿಭವಃ ।**
**ಷಡೈಶ್ವರ್ಯೈಃ ಪೂರ್ಣೋ ಯ ಇಹ ಭಗವಾನ್ ಸ ಸ್ವಯಮಯಂ**
**ನ ಚೈತನ್ಯಾತ್ಕೃಷ್ಣಾಜ್ಜಗತಿ ಪರತತ್ತ್ವಂ ಪರಮಿಹ ॥**

ಉಪನಿಷತ್ತುಗಳು ಪ್ರತಿಪಾದಿಸುತ್ತಿರುವ ಅದ್ವೈತಬ್ರಹ್ಮ ಯಾವುದೋ, ಯಾವುದು ಆ ಬ್ರಹ್ಮದ ಶರೀರವಾಗಿ ಶೋಭಿಸುತ್ತಿದೆಯೋ, ಯಾವುದು ಅಂತರ್ಯಾಮೀ ಪುರುಷನಾಗಿ ಸಕಲ ಜೀವಿಗಳನ್ನೂ ತುಂಬಿ ಆತ್ಮ ಎನ್ನಿಸಿಕೊಂಡಿದೆಯೋ, ಯಾವುದು ಆರು ಐಶ್ವರ್ಯಗಳಿಂದ (ಸಮಗ್ರ ಐಶ್ವರ್ಯ, ಸಕಲವಿಧಶಕ್ತಿ, ಕೀರ್ತಿ, ಕಾಂತಿ, ಸಮಸ್ತ ಜ್ಞಾನ, ವೈರಾಗ್ಯ – ಈ ಆರು ಐಶ್ವರ್ಯ) ಪೂರ್ಣವಾಗಿ ಭಗ-ವಂತ ಎಂದು ಕರೆಯಲ್ಪಟ್ಟಿದೆಯೋ ಅಂತಹ ಪರತತ್ತ್ವವಾದ ಶ್ರೀಕೃಷ್ಣನು, ಚೈತನ್ಯ ಪ್ರಭುವಿಗಿಂತ ಬೇರೆ ಅಲ್ಲ.

**ರಾಧಾ ಕೃಷ್ಣಪ್ರಣಯವಿಕೃತಿರ್ಹ್ಲಾದಿನೀ ಶಕ್ತಿರಸ್ಮಾದ್**
**ಏಕಾತ್ಮಾನಾವಪಿ ಭುವಿ ಪುರಾ ದೇಹಭೇದಂ ಗತೌ ತೌ ।**
**ಚೈತನ್ಯಾಖ್ಯಂ ಪ್ರಕಟಮಧುನಾ ತದ್ದ್ವಯಂ ಚೈಕ್ಯಮಾಪ್ತಂ**
**ರಾಧಾಭಾವದ್ಯುತಿಸುವಲಿತಂ ನೌಮಿ ಕೃಷ್ಣಸ್ವರೂಪಮ್ ॥**

ಕೃಷ್ಣನ ಪ್ರೇಮಸ್ವರೂಪಿಣಿ, ಆನಂದಶಕ್ತಿ ರಾಧೆ, ಆ ಕೃಷ್ಣನದೇ ಆತ್ಮ. ಈ ಇಬ್ಬರೂ ಒಂದೇ ಆಗಿದ್ದರೂ, ಹಿಂದೆ (ಕೃಷ್ಣಾವತಾರ ಕಾಲದಲ್ಲಿ) ಎರಡು ದೇಹಗಳಾಗಿ ಇದ್ದವರು, ಈಗ ಚೈತನ್ಯ ರೂಪದಲ್ಲಿ ಪ್ರಕಟಗೊಂಡು, ರಾಧಾ – ಕೃಷ್ಣ ಎಂದು ಎರಡಾಗಿದ್ದ ಅವರು ಒಂದೇ ಆದರು. ಹೀಗೆ ರಾಧಾಭಾವದಿಂದ ಪೂರ್ಣನಾಗಿರುವ ಕೃಷ್ಣಸ್ವರೂಪನಾದ ಚೈತನ್ಯದೇವನನ್ನು ನಮಿಸುತ್ತೇನೆ.

**ಶ್ರೀರಾಧಾಯಾಃ ಪ್ರಣಯಮಹಿಮಾ ಕೀದೃಶೋ ವಾನಯೈವಾ-**
**ಸ್ವಾದ್ಯೋ ಯೇನಾದ್ಭುತ ಮಧುರಿಮಾ ಕೀದೃಶೋ ವಾ ಮದೀಯಃ ।**
**ಸೌಖ್ಯಂ ಚಾಸ್ಯಾ ಮದನುಭವತಃ ಕೀದೃಶಂ ವೇತಿ ಲೋಭಾತ್**
**ತದ್ಭಾವಾಢ್ಯಃ ಸಮಜನಿ ಶಚೀಗರ್ಭಸಿಂಧೌ ಹರೀಂದುಃ ॥**

ಶ್ರೀರಾಧೆಯ ಪ್ರೇಮದ ಮಹಿಮೆ ಎಂತಹುದೋ ! ಅಂತಹ ಪ್ರೇಮದಿಂದಲೇ ಭಗವತ್ಪ್ರೇಮದ ಅದ್ಭುತ ಮಾಧುರ್ಯವನ್ನು ಆಸ್ವಾದಿಸಬೇಕು; ನಾನು ಅನುಭವಿಸುತ್ತಿರುವ ಭಗವದಾನಂದದ ಸುಖ ಶ್ರೀರಾಧೆಯ ಸುಖದಂತಹುದೋ ಎಂಬ ಲೋಭದಿಂದ, ಆ ರಾಧಾಭಾವದಿಂದ ಪೂಜ್ಯನಾದ ಹರಿ ಎಂಬ ಚಂದ್ರನು ಶಚೀಗರ್ಭ ಸಮುದ್ರದಲ್ಲಿ ಜನ್ಮ ತಳೆದನು.

# ಶ್ರೀರಾಮನ ಉಪದೇಶಗಳು



* ಶ್ರೀರಾಮನು ಹನುಮಂತನಿಗೆ ಹೇಳುತ್ತಾನೆ: ''ಪರಮಾತ್ಮನ ನೆರಳೇ ಎಲ್ಲ ಜೀವಿಗಳಲ್ಲಿ ಜೀವಾತ್ಮನಾಗಿ ಪ್ರತಿಬಿಂಬಿತವಾಗಿದೆ. ವಿಶಾಲವಾದ ಆಕಾಶವೇ ಎಲ್ಲ ನದಿ, ಸರೋವರಗಳಲ್ಲಿ ಪ್ರತಿಬಿಂಬಿಸಿರುವುದನ್ನು ನೀನು ನೋಡುತ್ತಿಲ್ಲವೆ?''

* ನನ್ನ ನಾಮವನ್ನು ಜಪಿಸುವುದರಿಂದ ಈ ಜಗತ್ತಿನ ಎಲ್ಲ ಪಾಪಗಳೂ ನಾಶವಾಗುವವು.ಆದರೆ ಜಪವನ್ನು ಏಕಾಗ್ರಚಿತ್ತದಿಂದ ಕೂಡಿದ ಭಕ್ತಿಯಿಂದ, ನನ್ನಲ್ಲಿ ಸಂಪೂರ್ಣ ಶರಣಾಗತಿಯಿಂದ ಮಾಡಿರಬೇಕು.

* ಶುದ್ಧವಾದ ಜ್ಞಾನವು ಎಲ್ಲ ಆಸೆ ಮತ್ತು ಆಸಕ್ತಿಗಳನ್ನು ಕೊಲ್ಲುತ್ತದೆ. ಸಕಾಮಕರ್ಮ ಯಾವುದೇ ಆಗಿರಲಿ, ಅದನ್ನು ಬಿಡಬೇಕು. ಅದು ನಿನ್ನನ್ನು ಜನನ-ಮರಣದ ಸಂಕೋಲೆಯಲ್ಲಿ ಬಂಧಿಸುತ್ತದೆ. ನಿಜವಾದ ಜ್ಞಾನವನ್ನು ಹೊಂದಲು ಅದು ಅಡ್ಡಿಯಾಗುವುದು.

* ಪಂಚಭೂತಗಳಿಂದಾದ, ಅತ್ಯಂತ ಸೀಮಿತವೂ ನಾಶವುಳ್ಳದ್ದೂ ಆದ ದೇಹವು ಆತ್ಮನಿಗಿಂತ ಭಿನ್ನವಾಗಿದೆ. ಆತ್ಮವು ಆದ್ಯಂತರಹಿತವೂ, ಅವಿನಾಶಿಯೂ ಆಗಿದೆ. ಅದು ದೇಹವನ್ನು ಸೃಷ್ಟಿಸಿಕೊಳ್ಳುವುದು. ಇದನ್ನು ಚೆನ್ನಾಗಿ ಮನನ ಮಾಡಿ ಆತ್ಮನನ್ನು ಅರಿಯಲೆತ್ನಿಸು.

* ಸೂರ್ಯೋದಯವಾದಾಗ ಜನರು ತಾವು ದುಡಿದು ಸಂಪಾದಿಸಬಹುದೆಂದು ಉತ್ಸಾಹ ತಾಳುತ್ತಾರೆ. ಸೂರ್ಯಾಸ್ತದ ವೇಳೆ ಅವರು ಆನಂದ ಹೊಂದುತ್ತಾರೆ. ಆದರೆ ತಮ್ಮ ಜೀವನ ಮುಳುಗುತ್ತಿದೆ ಎಂದು ಅವರು ತಿಳಿಯುವುದಿಲ್ಲ.

*'ಶ್ರೀರಾಮ ಸೂಕ್ತಿ'ಯಿಂದ*

# ಸಂಸ್ಕೃತಿಯ ಹೆಜ್ಜೆ ಗುರುತು

ಸಂಪಾದಕೀಯ

## ನಮ್ಮ ಸಾಂಸ್ಕೃತಿಕ ಏಕತೆ

ಭಾರತವು ಒಂದು ದೇಶವಾಗಿ ಗುರುತಿಸಲ್ಪಟ್ಟದ್ದು ಬ್ರಿಟಿಷರು ಆಗಮನದ ತರುವಾಯವೆಂದೂ, ಆದ ಕಾರಣ ರಾಜಕೀಯವಾಗಿ, ಭೌಗೋಳಿಕವಾಗಿ ಅದೆಂದೂ ಒಂದಾಗಿರಲಿಲ್ಲವೆಂದೂ, ಆದ್ದರಿಂದ ವೈವಿಧ್ಯತೆಗಳಿಂದ ತುಂಬಿ ತುಳುಕುವ ಈ ನಾಡನ್ನು ಒಂದಾಗಿ ಪರಿಗಣಿಸುವ ರೀತಿಯೇ ನಮ್ಮಲ್ಲಿರಲಿಲ್ಲವೆಂದೂ ಹಲವು ಮಂದಿ ಆಧುನಿಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯ ಸಂಪೂರ್ಣ ನಿಜವಲ್ಲ; ನಿರಂತರ ಏರುಪೇರುಗಳಿಂದ, ಅರಾಜಕತೆಯಿಂದ ಹಾಗೂ ಸಂಘರ್ಷಗಳಿಂದ ಕೂಡಿದ ನಮ್ಮ ರಾಜಕೀಯ ಇತಿಹಾಸದಲ್ಲಿ ಇಡೀ ದೇಶವನ್ನು ಸಮಗ್ರವಾಗಿ ಆಳಿದ ಕಾಲಘಟ್ಟಗಳೂ ಇದ್ದವು; ಸಾಗರ, ಪರ್ವತ ಮೊದಲಾದ ಭೌಗೋಳಿಕ ಎಲ್ಲೆಗಳಿಂದ ಪ್ರತ್ಯೇಕಿಸಲ್ಪಟ್ಟ ಈ ನಾಡಿನಲ್ಲಿ ಸಹಜವಾಗಿ ಒಂದು ಬಗೆಯ ಸಾಂಸ್ಕೃತಿಕ ಏಕತೆ ನಮ್ಮಲ್ಲಿತ್ತು. ಭೌಗೋಳಿಕ, ರಾಜಕೀಯ ಏಕತೆಗಿಂತ ಸಾಂಸ್ಕೃತಿಕ ಏಕತೆ ನಮ್ಮಲ್ಲಿ ಬಲಿಷ್ಠವಾಗಿತ್ತು ಎಂಬ ಸತ್ಯವನ್ನು ಅನೇಕ ಮಂದಿ ಚಿಂತಕರು ನಿರ್ಲಕ್ಷಿಸುತ್ತಾರೆ. ಒಂದು ಜನಾಂಗದ ಜೀವನಾಡಿಯನ್ನರಿಯದೆ ಅದರ ಶಕ್ತಿ, ಸಾಮರ್ಥ್ಯವನ್ನು ಅಳೆಯಲಾಗದು. ಸಂಸ್ಕೃತಿಯೇ ನಮ್ಮ ಜನಾಂಗದ ಜೀವನಾಡಿ; ಅದೇ ನಮ್ಮನ್ನು ಒಗ್ಗೂಡಿಸುವುದು. ಎಷ್ಟೇ ಭಿನ್ನತೆಗಳಿರಲಿ, ಎಂತೆಂತಹ ಬಿಕ್ಕಟ್ಟುಗಳಿರಲಿ, ಅದು ನಮ್ಮನ್ನು ಕಾಪಾಡುವ ಶಕ್ತಿಯಾಗಿದೆ.

ಸಂಸ್ಕೃತಿ ಎಂದರೇನು? – ಹೀಗೆ ಪ್ರಶ್ನಿಸುವ ಮೂಲಕ ಅದನ್ನು ನಿರ್ವಚಿಸುವ, ಅದರ ಲಕ್ಷಣಗಳನ್ನು ವಿವರಿಸುವ ಪ್ರವೃತ್ತಿ ಬೆಳೆದು ಬಂತು. ವಿಭಿನ್ನ ದೃಷ್ಟಿಕೋನಗಳಿಂದ, ವಿವಿಧ ಅಧ್ಯಯನ ಕ್ಷೇತ್ರಗಳ ಹಿನ್ನಲೆಯಿಂದ ಇದನ್ನು ವಿವರಿಸಲಾಯಿತು. ಐತಿಹಾಸಿಕ, ಸಮಾಜ ಶಾಸ್ತ್ರೀಯ, ಭಾಷಾವೈಜ್ಞಾನಿಕ, ಜಾನಪದ, ಧಾರ್ಮಿಕ, ತತ್ತ್ವಶಾಸ್ತ್ರೀಯ – ಇವೇ ಮೊದಲಾದ ಅಧ್ಯಯನ ಕ್ಷೇತ್ರಗಳ ದೃಷ್ಟಿಯಿಂದ ಹಲವು ವಿವರಣೆಗಳು ದೊರಕುತ್ತವೆ. ಆದರೆ ಇವೂ ಸೀಮಿತ ದೃಷ್ಟಿಯ ವಿವರಣೆಯಲ್ಲವೆ? ಆಯಾ ಕ್ಷೇತ್ರದ ಪರಿಧಿಯಾಚೆಗೆ ಅದಕ್ಕೇನು ಮೌಲ್ಯವಿದೆ? ಸಮಗ್ರವಾದ, ಸಂಪೂರ್ಣವೆನ್ನಿಸುವ ವಿವರಣೆ ಅಸಾಧ್ಯವೆನ್ನಬೇಕೆ?

## ಸರಳ, ಸಹಜ ಗ್ರಹಿಕೆ

ಈ ಎಲ್ಲ ದೃಷ್ಟಿಕೋನಗಳಾಚೆ ಸರಳವಾಗಿ, ಸಹಜವಾಗಿ ಅರ್ಥೈಸಿಕೊಳ್ಳುವ ಸಾಧ್ಯತೆಯೊಂದಿದೆ. 'ಭಾರತೀಯ ಸಂಸ್ಕೃತಿ' ಎಂದೊಡನೆ ನಮ್ಮ ಮನಸ್ಸಿಗೆ ಬರುವ ಚಿತ್ರ ಎಷ್ಟೇ ಅಸ್ಪಷ್ಟವಾಗಿರಲಿ, ಅದು ಅತ್ಯಂತ ವಿಶಾಲವಾದುದು; ಬದುಕಿನ ಎಲ್ಲ ಮಗ್ಗುಲುಗಳನ್ನೂ ತಬ್ಬಿಕೊಳ್ಳುವಂಥದು; ಅದರ ಎಲ್ಲ ವಿಶಿಷ್ಟ ಗುಣ, ಲಕ್ಷಣಗಳನ್ನೂ ಒಳಗೊಳ್ಳುವಂಥದು. ವಿಭಿನ್ನ ದೃಷ್ಟಿಕೋನಗಳ ಮೂಸೆಯಲ್ಲಿ ಈ ಸರಳ ಗ್ರಹಿಕೆ ತೀರ ಅಸಂಬದ್ಧವೆನಿಸಿದರೆ, ಅದಕ್ಕೆ ಪ್ರತಿಯಾಗಿ ನೀವು ಎಂಥ ಗ್ರಹಿಕೆಯನ್ನು ನೀಡುವಿರಿ? ಒಂದೊಂದು ದೃಷ್ಟಿಕೋನಗಳ ಹಿಂದೆ ಅದರದೇ ಆದ ಮಿತಿಗಳಿವೆ; ಅದು ನೀಡುವ ಗ್ರಹಿಕೆ ಇನ್ನಷ್ಟು ಅಸಂಬದ್ಧ ಮಾತ್ರವಲ್ಲ, ಇನ್ನಾವುದೋ ಹಿತಾಸಕ್ತಿಗಳಿಂದ ಪ್ರೇರಿತವೂ ಕಲುಷಿತವೂ ಆಗಿಬಿಡುತ್ತದೆ. ಎಲ್ಲಿ ಎಲ್ಲವನ್ನೂ ಒಳಗೊಳ್ಳುವ, ಸಮಸ್ತ ಜನಾಂಗವನ್ನು ಪ್ರತಿನಿಧಿಸುವ ಒಂದು ನೋಟ ಅಲಭ್ಯವೋ, ಅಂಥ ಸಂದರ್ಭದಲ್ಲಿ 'ಸಂಸ್ಕೃತಿ' ಎಂಬ ಶಬ್ದವು ಹೊಮ್ಮಿಸುವ ವಿಶಾಲ ಅರ್ಥವನ್ನು ಅದರ ಅಸ್ಪಷ್ಟತೆಗಳೊಂದಿಗೆ ಹಾಗೆಯೇ ಗ್ರಹಿಸುವುದು ಸಮಂಜಸ. ಸೂಕ್ಷ್ಮ ವಿಶ್ಲೇಷಣೆಯಿಂದ ಅರಿವೇ ದಿಕ್ಕು ತಪ್ಪುವಂತಿದ್ದರೆ, ಅಂಥ ವಿಶ್ಲೇಷಣೆಯಿಂದ ಲಾಭವೇನು?

'ಸಂಸ್ಕೃತ' ಎಂದರೆ ಸಂಸ್ಕರಿಸಲ್ಪಟ್ಟ, ಪರಿಷ್ಕರಿಸಿದ, ಒಳ್ಳೆಯದನ್ನಾಗಿ ಮಾಡಿದ, ವಿದ್ಯಾಬುದ್ಧಿವಿನಯಗಳನ್ನು ಹೊಂದಿದ ಎಂಬ ಅರ್ಥಗಳಿವೆ. ಇವುಗಳಿಂದ ಕೂಡಿದ ಉತ್ತಮ ಜೀವನಕ್ರಮವೇ 'ಸಂಸ್ಕೃತಿ.' ಇಲ್ಲಿ ವಿದ್ಯೆ, ತಿಳುವಳಿಕೆ, ನಯನಾಜೂಕು, ಮೌಲ್ಯಗಳು, ಆದರ್ಶ ಇವುಗಳಿಗೆ ಅತ್ಯಂತ ಮಹತ್ವವಿದೆ. ಈ ಬಗೆಯ ಸಂಸ್ಕೃತಿ ಅನೇಕ ತಲೆಮಾರುಗಳ ಮೂಲಕವೂ, ವಿವಿಧ ಜನಾಂಗಗಳ ಕೊಡು–ಕೊಳ್ಳುವಿಕೆಗಳಿಂದಲೂ, ಹೊಸ ಹೊಸ ಜ್ಞಾನ, ಚಿಂತನೆಗಳ ಆವಿಷ್ಕಾರಗಳಿಂದಲೂ, ತಾತ್ತ್ವಿಕ ಅನುಸಂಧಾನದಿಂದಲೂ ಬಂದೊದಗುತ್ತದೆ. ಕಲೆ, ಸಾಹಿತ್ಯ, ಸಂಗೀತ, ನಾಟಕ,

ತತ್ತ್ವಜ್ಞಾನ, ವಾಣಿಜ್ಯ ವ್ಯವಹಾರ, ಶಿಲ್ಪಕಲೆ, ವಾಸ್ತು, ನಗರಾಭಿವೃದ್ಧಿ, ಗುಡಿಕೈಗಾರಿಕೆ, ವಿಜ್ಞಾನ-ಹೀಗೆ ಸಂಸ್ಕೃತಿ ಒಳಗೊಳ್ಳದ ಕ್ಷೇತ್ರವೇ ಇಲ್ಲವೆನ್ನಬಹುದು. ಎಲ್ಲೆಡೆ ಮಾನವ ಅದೆಷ್ಟು ಹೊಸತನ್ನು, ಒಳಿತು ಹಾಗೂ ನಯನಾಜೂಕುಗಳನ್ನು ಕಂಡುಕೊಳ್ಳುವನೋ, ಸಂಸ್ಕೃತಿ ಅಷ್ಟು ಉನ್ನತಿಗೇರಿದೆ ಎನ್ನಬಹುದು.

### ನಮ್ಮ ಸಂಸ್ಕೃತಿಯ ಜೀವನಾಡಿ

ಆಧ್ಯಾತ್ಮಿಕತೆಯೇ ನಮ್ಮ ಸಂಸ್ಕೃತಿಯ ಜೀವಾಳ ಎಂಬ ಅಂಶವನ್ನು ಸ್ವಾಮಿ ವಿವೇಕಾನಂದರೇ ಒತ್ತುನೀಡಿ ಹೇಳುತ್ತಾರೆ. ಆದ್ದರಿಂದ ಈ ಅಳತೆಗೋಲಿನಿಂದ ಸಂಸ್ಕೃತಿಯ ವಿವಿಧ ಆಯಾಮಗಳನ್ನು ಅಳೆಯುವುದು ಅತ್ಯಂತ ಸೂಕ್ತವೆನಿಸುತ್ತದೆ. 'ಆಧ್ಯಾತ್ಮಿಕತೆ' ಎಂಬುದು ಧರ್ಮ, ತತ್ತ್ವಶಾಸ್ತ್ರ ಹಾಗೂ ಇನ್ನಿತರ ಕ್ಷೇತ್ರಗಳೊಂದಿಗೆ ನಿಕಟವಾಗಿ ಸಂಬಂಧ ಹೊಂದಿರುವ ವಿಚಾರವಾದರೂ, ಅದಕ್ಕೆ ಖಚಿತವಾದ, ಸ್ಪಷ್ಟವಾದ ಅರ್ಥವಿದೆ. ಮತಧರ್ಮಗಳ, ವಿಭಿನ್ನ ಪಂಗಡಗಳ, ನಾನಾ ಪಂಥಗಳ ಹಂಗಿಲ್ಲದೆ, ತತ್ತ್ವಶಾಸ್ತ್ರದ ಬೆನ್ನೆಲುಬಿಲ್ಲದೆ, ಆಧ್ಯಾತ್ಮಿಕತೆ ಸ್ವತಂತ್ರವಾಗಿ ಒಂದು ಅರ್ಥವನ್ನು ಕೊಡಬಲ್ಲದು. ಸತ್ಯದ ಯಥಾರ್ಥ ಅನುಭವವನ್ನು ಪಡೆಯುವುದು – ಇದೇ ಆಧ್ಯಾತ್ಮಿಕತೆ. 'ಸತ್ಯ' ಎನ್ನುವುದನ್ನು ದೇವರು, ಆತ್ಮ, ಅವತಾರ, ವೇದ, ಸಂತ ಇವೇ ಮೊದಲಾದ ನೆಲೆಗಳತ್ತ ವಿಸ್ತರಿಸಿದಾಗ ಒಬ್ಬೊಬ್ಬರು ಕಂಡುಕೊಳ್ಳುವ ಮಾರ್ಗವೂ ಒಂದೊಂದು ಬಗೆಯಾಗುವುದು. ಆಗ ಅದಕ್ಕೆ ಸಂಬಂಧಿಸಿದ ವ್ಯಕ್ತಿ, ಅನುಭವ, ಗ್ರಂಥ, ವಿಚಾರ ಎಲ್ಲವೂ 'ಅಧ್ಯಾತ್ಮ'ವೆನಿಸುವುದು. ಈ ಅಧ್ಯಾತ್ಮವನ್ನು ಕುರಿತದ್ದೇ ಆಧ್ಯಾತ್ಮಿಕತೆ; ಇದೇ ನಮ್ಮ ಸಂಸ್ಕೃತಿಯ ಜೀವನಾಡಿ.

ಆದರೆ ನಮ್ಮ ಸಂಸ್ಕೃತಿಯ, ಸಾಂಸ್ಕೃತಿಕ ಏಕತೆಯ ಅರಿವು ನಮ್ಮ ಜನರಿಗಿತ್ತೆ? ಎಂದಿಗೂ ಇರಲಿಲ್ಲ ಎಂಬ ವಾದಗಳಿವೆ. ಆದರೆ, ಅರಿವು ಅಥವಾ ಪ್ರಜ್ಞೆ ಇರಲಿಲ್ಲವೆಂದ ಮಾತ್ರಕ್ಕೆ ಅದಕ್ಕೆ ಅಸ್ತಿತ್ವವೇ ಇರಲಿಲ್ಲ ಎನ್ನಲಾಗದು. ನಮ್ಮ ಜನತೆಗೆ 'ಒಂದು ಭಾರತ' ಎಂಬ ಅರಿವು ಇರಲಿಲ್ಲ ಎಂದ ಮಾತ್ರಕ್ಕೆ 'ಭಾರತವೇ ಇರಲಿಲ್ಲ' ಎನ್ನಲಾಗುವುದೆ? ಆಧ್ಯಾತ್ಮಿಕತೆ, ಸಂಸ್ಕೃತಿ, ಅದನ್ನನುಸರಿಸಿದ ಏಕತೆ ನಮ್ಮಲ್ಲಿ ಹಾಸುಹೊಕ್ಕಾಗಿತ್ತು. ಉಸಿರಾಡುವಾಗ ಪ್ರತಿಕ್ಷಣವೂ 'ನಾನು ಉಸಿರಾಡುತ್ತಿದ್ದೇನೆ' ಎಂಬ ಅರಿವು ನಮಗಿರುವುದೆ? ಅರಿವು ಇರಲಿ, ಬಿಡಲಿ; ನಾವಂತೂ ಉಸಿರಾಡುತ್ತಲೇ ಇದ್ದೇವೆ. ಹೀಗೆ, ನಮ್ಮ ಸಂಸ್ಕೃತಿ ನಮಗೆ ಉಸಿರಿನಂತೆ. ಅದು ಎಂದಿಗೂ ಇದ್ದೇ ಇರುವುದು.

### ಇತಿಹಾಸ ಕಲಿಸಿದ ಪಾಠ

ಇತಿಹಾಸ ನಮಗೆ ಹಲವು ಪಾಠಗಳನ್ನು ಕಲಿಸಿತು. ರಾಜಕಾರಣ, ಸಂಸ್ಕೃತಿ, ಆರ್ಥಿಕ ವ್ಯವಸ್ಥೆ, ವ್ಯವಸಾಯ-ವ್ಯಾಪಾರ, ವಿಜ್ಞಾನ-ತಂತ್ರಜ್ಞಾನ, ಧರ್ಮ-ತತ್ತ್ವ ಈ ಎಲ್ಲ ಕ್ಷೇತ್ರಗಳಲ್ಲೂ ಮುಂದಿದ್ದ ನಾವು ಒಂದು ಬಲಿಷ್ಠ ಆಡಳಿತವನ್ನು ನಿರಂತರ ಮುಂದುವರೆಸಿಕೊಂಡು ಬರುವಲ್ಲಿ, ಬಾಹ್ಯ ದಾಳಿಗಳಿಂದ ನಮ್ಮನ್ನು ಸಂರಕ್ಷಿಸಿಕೊಳ್ಳುವಲ್ಲಿ ಸಮರ್ಥರಾಗಲಿಲ್ಲ. ಪರಕೀಯ ದಾಳಿಗಳಿಂದ ನಮಗೆ ಅನೇಕ ಹೊಸ ವಿಚಾರಗಳು ಬಂದವು, ಹೊಸ ಸಂಸ್ಕೃತಿಗಳು ಬಂದವು, ನಾವು ಸಮೃದ್ಧರಾದೆವು ಎಂಬ ವಾದ ಸಂಪೂರ್ಣ ಸರಿಯಲ್ಲ. ಪರರ ದಾಳಿ, ಆಳ್ವಿಕೆಯಿಲ್ಲದೆಯೂ ಬಾಹ್ಯವಿಚಾರ, ಪ್ರಭಾವಗಳು ಬರುತ್ತವೆ. ಅನೇಕ ಹೊಸ ವಿಷಯಗಳ ಪರಿಚಯವಾಗುತ್ತವೆ. ಆದರೆ ರಾಜಕೀಯ ಅಭದ್ರತೆ ಅಥವಾ ಅರಾಜಕತೆಯಿಂದ ಜನಾಂಗ ಛಿದ್ರಛಿದ್ರವಾಗುತ್ತದೆ; ಕಲೆ, ಸಂಸ್ಕೃತಿ, ಜನಜೀವನ, ಸೊರಗುತ್ತದೆ. ಅರ್ಥವ್ಯವಸ್ಥೆ ಕುಸಿಯುತ್ತದೆ. ನಮ್ಮಲ್ಲಿ ಇಂಥ ಅರಾಜಕತೆ ಶತಶತಮಾನಗಳವರೆಗೂ ಮುಂದುವರೆಯಿತು. ಜನಾಂಗ ಮತ್ತು ಸಂಸ್ಕೃತಿಯ ಉಚ್ಛ್ರಾಯ ಸ್ಥಿತಿ ಕೇವಲ ಕನಸಾಯಿತು. ಇಂಥ ಬಿಕ್ಕಟ್ಟಿನ ಸನ್ನಿವೇಶದಲ್ಲೂ ನಮ್ಮ ಸಂಸ್ಕೃತಿಯ ಏಕತೆಯನ್ನು ಹಿಡಿದು ನಿಲ್ಲಿಸಿದ ಒಂದು ಅಸಾಧಾರಣ ಶಕ್ತಿ ನಮ್ಮ ಆಧ್ಯಾತ್ಮಿಕತೆ. ಇದರ ಬಲದಿಂದಲೇ ನಮಗೆ ಮತ್ತೆ 'ಒಂದು ಭಾರತ'ದ ಅಗತ್ಯ ಹಾಗೂ ಅನಿವಾರ್ಯತೆ ನಮ್ಮ ಮುಂದೆ ಕಂಡುಬಂದಿತು.

### ಆಧುನಿಕತೆಯ ಸೋಗು

ಸ್ವತಂತ್ರ ಭಾರತದ ಹೊಸ ಹುಮ್ಮಸ್ಸಿನೊಂದಿಗೆ ಅನೇಕ ಹೊಸ ವಿಚಾರಗಳು ಬಂದವು; ಆಧುನಿಕ ವಿಜ್ಞಾನದ ಆವಿಷ್ಕಾರಗಳೂ ಆದವು. ತಂತ್ರಜ್ಞಾನ, ನೂತನ ಕೈಗಾರಿಕಾ ಅಭಿವೃದ್ಧಿ, ಹೊಸಹೊಸ ಪ್ರಗತಿಯ ರಂಗಗಳು ಕಾಣಿಸಿಕೊಂಡವು. ಸಮೃದ್ಧವಾದ ಪೈರು ಬೆಳೆಯುವುದರೊಂದಿಗೆ ಕಳೆಯೂ ಹುಲುಸಾಗಿ ಬೆಳೆದುಬಂದಂತೆ, ನಮ್ಮ ಸಂಸ್ಕೃತಿಗೆ ಹಿತಕರವಲ್ಲದ ಅನೇಕ ಸಂಗತಿಗಳೂ ಮೆರೆದಾಡುತ್ತಿರುವುದು ದುರದೃಷ್ಟಕರ. ಪಾಶ್ಚಾತ್ಯರ ಅಂಧಾನುಕರಣೆ, ಭೋಗಜೀವನದ ವಿಲಾಸ, ಭೌತಿಕವಾದ ಹಲವು ವಿಚಾರಗಳು ನಮ್ಮತನವನ್ನು ನಾವೇ ಕಡೆಗಣಿಸುವಂತೆ ಮಾಡಿದೆ. ನಾವು ಎಲ್ಲ ರಂಗಗಳಲ್ಲೂ ಮುಂದುವರೆಯಬೇಕು, ನಿಜ. ಆದರೆ ಆ ಎಲ್ಲ ಅಭಿವೃದ್ಧಿ ನಮ್ಮ ಸಂಸ್ಕೃತಿಯ ಬೇರನ್ನೇ ಕತ್ತರಿಸುವಂತೆ ಮಾಡಬಾರದು. ಬಂದಣಿಕೆ ಎಷ್ಟೇ ಸಮೃದ್ಧವಾಗಿರಲಿ, ಅದು ಮೂಲವೃಕ್ಷಕ್ಕೆ ಮಾರಕವಲ್ಲವೆ? ಇಂದಿನ ಸಮೂಹಮಾಧ್ಯಮಗಳು, ವಿಶೇಷವಾಗಿ ಪತ್ರಿಕೆ, ಟಿ.ವಿ, ಸಿನಿಮಾ, ಇಂಟರ್‌ನೆಟ್, ಹಾಗೂ ಮೊಬೈಲ್‌ಗಳು ನಮ್ಮ ಸಂಸ್ಕೃತಿಯ ಗಟ್ಟಿತನವನ್ನು ಜಗತ್ತಿನೆಲ್ಲೆಡೆ ಪಸರಿಸುವಲ್ಲಿ ಪ್ರಮುಖ ಸಲಕರಣೆಯಾಗಬಹುದಾಗಿತ್ತು; ದುರದೃಷ್ಟವಶಾತ್ ಅವುಗಳೇ ಸಂಸ್ಕೃತಿಗೆ ಮಾರಕವಾಗುತ್ತಿವೆ. ಸದ್ದಿಲ್ಲದೆ ಮನೆಮಾಡುವ ವ್ಯಾಪಾರೀಕರಣದ ಸೋಗಿನಲ್ಲಿ ಸಂಸ್ಕೃತಿಯ ಆಯಾಮಗಳು ತತ್ತರಿಸುತ್ತಿವೆ.

### ಹೊಸ ಚಿಂತನೆಯ ಕಿರಣಗಳು

ಆಧುನಿಕ ಯುಗದಲ್ಲಿ ಭಾರತ ಕೇವಲ ಸಾಂಸ್ಕೃತಿಕ ಅವನತಿಯತ್ತ ಮುಖಮಾಡಿತು ಎನ್ನಲಾಗದು. ವೈವಿಧ್ಯತೆಗಳಿಂದ ಕೂಡಿದ ಜನಜೀವನದಲ್ಲಿ ಎಲ್ಲ ವಿಚಾರಗಳೂ ಮೂಡಿಮುಳುಗುತ್ತವೆ; ಕಾಲ, ಸಂದರ್ಭದ ಅಗತ್ಯಕ್ಕನುಗುಣವಾಗಿ ಕೆಲವು ವಿಚಾರಗಳು

ವ್ಯಾಪಕಗೊಳ್ಳುತ್ತವೆ. ಅನೇಕ ವಲಯಗಳಲ್ಲಿ ಸಾಂಸ್ಕೃತಿಕ ಅರಿವು, ಅದರ ಸಂರಕ್ಷಣೆ, ಅದನ್ನು ವಿಸ್ತರಿಸುವ ಕುರಿತಾದ ಪ್ರಾಮಾಣಿಕ ಪ್ರಯತ್ನಗಳಾಗಿವೆ. ವೈಯಕ್ತಿಕ ನೆಲೆಯಲ್ಲಾದರೂ, 'ಇದು ನಮ್ಮ ಬದುಕಲ್ಲ. ನಮ್ಮ ಸಂಸ್ಕೃತಿಗೆ ಇದು ಒಪ್ಪುವಂತಹದಲ್ಲ. ನಾವು ಹೊಸ ರೀತಿಯಲ್ಲಿ ನಮ್ಮ ಸಂಸ್ಕೃತಿಯನ್ನು ಕಟ್ಟಬೇಕು' ಎನ್ನುವ ಚಿಂತನೆಗಳು ಮೂಡತೊಡಗಿವೆ. ಇದು ಸಾಮೂಹಿಕವಾಗಿಯೂ ಕೆಲವೊಮ್ಮೆ ಸದ್ದು ಮಾಡುತ್ತಿದೆ; ಆದರೆ ಭಾರತೀಯ ಸಂಸ್ಕೃತಿಯ ಒಂದು ಮುಖ್ಯ ಲಕ್ಷಣವಾದ 'ವಿಶ್ವಶಾಂತಿ'ಯ ಆದರ್ಶಕ್ಕೆ ಭಂಗ ವುಂಟಾಗದಂತೆ ಈ ಹೊಸ ಉದಯ ಕಾರ್ಯಪ್ರವೃತ್ತವಾಗಬೇಕು. ಅತ್ಯಂತ ಪ್ರಭಾವಶಾಲಿಯಾದ ಶಿಕ್ಷಣ, ಆಡಳಿತ ಹಾಗೂ ಸಮೂಹ ಮಾಧ್ಯಮಗಳಲ್ಲಿ ನಮ್ಮ ಸಂಸ್ಕೃತಿಗೆ ಮಾರಕವಾದ ಅಂಶಗಳು ಸೇರಿಕೊಳ್ಳದಂತೆ ತಡೆಯಬೇಕಾಗಿದೆ. ಕೇವಲ ನೀತಿ, ನಿಯಮ ಗಳಷ್ಟೇ ಇವನ್ನು ಮಾಡಲಾರವು; ಪ್ರತಿಯೊಬ್ಬ ಪ್ರಜೆಯ ಇಚ್ಛಾ ಶಕ್ತಿಯೂ ಇದರಲ್ಲಿ ತನ್ನ ಪಾತ್ರ ವಹಿಸಬೇಕು.

### ಮುಂದಿನ ಹಾದಿ

ಮುಂದಿನ ದಿನಗಳಲ್ಲಿ ನಮ್ಮ ಸಾಂಸ್ಕೃತಿಕ ಜೀವನಸ್ರೋತವನ್ನು ಹೇಗೆ ಮುನ್ನಡೆಸಬೇಕು ಎಂಬುದೊಂದು ಪ್ರಶ್ನೆ. ಇದಕ್ಕೆ ಉತ್ತರ: ಸಂಸ್ಕೃತಿ ತಾನಾಗಿಯೇ ಮುನ್ನಡೆಯುವುದು; ಅದನ್ನು ಯಾರೂ ಮುನ್ನಡೆಸಬೇಕಿಲ್ಲ. ತನಗೆ ಬೇಕಾದ, ತನಗೆ ಯೋಗ್ಯವಾದ ಅಂಶ ಗಳನ್ನು ಸ್ವೀಕರಿಸಲು ಅಥವಾ ತ್ಯಜಿಸಲು ಏನೇನು ಕಾರ್ಯಗಳು ನಡೆಯಬೇಕೋ ಅವನ್ನು ಸಂಸ್ಕೃತಿಯೇ ಕಂಡುಕೊಳ್ಳುವುದು. ಸನಾತನ ಧರ್ಮವನ್ನು ಆಧರಿಸಿದ ಸನಾತನ ಸಂಸ್ಕೃತಿ ನಮ್ಮದು; ಅದು ಇಂದು ನಿನ್ನೆಯದಲ್ಲ. ಸಿಂಧೂ ನಾಗರಿಕತೆ, ವೇದಕಾಲೀನ ಸಂಸ್ಕೃತಿ, ಇನ್ನೂ ಪ್ರಾಚೀನ ಕಾಲದ ಜನಜೀವನದಲ್ಲಿ ಹರಿದಿದ್ದ ಅದೇ ಆಧ್ಯಾತ್ಮಿಕ ಝರಿ ಈಗಲೂ ಹರಿಯುತ್ತಿದೆ; ನಡುನಡುವೆ ಅದು ಶಾಖೋಪಶಾಖೆಗಳಿಂದ ಕೂಡಿದ ಮಹಾನದಿಯಾಗಿದೆ. ಹಲವು ಸಂದರ್ಭಗಳಲ್ಲಿ ಜಗತ್ತನ್ನೇ ವ್ಯಾಪಿಸುವ ಮಹಾಸಾಗರದಂತೆ ಕಂಡುಬಂದಿದೆ. ಹಲವೆಡೆ ಧುಮ್ಮಿಕ್ಕುವ, ಲಾಸ್ಯವಾಡುವ, ಮತ್ತೆ ಹೊರಳಿ, ನಲಿದಾಡಿ ಹರಿಯುವ ಅದೇ ಝರಿ ನಮ್ಮ ಅಂತರಂಗದ ನಿತ್ಯನೂತನ ಜೀವನದಿಯಾಗಬೇಕು; ಎಲ್ಲೆಡೆ ಪವಿತ್ರತೆಯನ್ನು ಹರಿಸುವ ಆನಂದಧಾಮವಾಗಬೇಕು. ಭಾವನಾತ್ಮಕವಾದ, ಆದ ರ್ಶದ ಈ ಜಗತ್ತು ಕ್ರಿಯಾರೂಪ ತಾಳಿ ನಮ್ಮ ಸುತ್ತ ಸಾಕಾರಗೊಂಡು ಎದ್ದುನಿಲ್ಲಬೇಕು. ❖

## ಓದುಗರ ವೇದಿಕೆ

ಡಿಸೆಂಬರ್ ೨೦೧೪ರ ಸಂಚಿಕೆಯಲ್ಲಿ ಡಾ. ಕೆ.ಅನಂತರಾಮು ಅವರ 'ವಿವೇಕಾನಂದರು ಹೇಳಿದ ನೀತಿಕತೆಗಳು' ಕತೆಯಲ್ಲಿ 'ಶಕ್ತಿಪಾತ'ದ ವಿಚಾರ ಬಂದಿದೆ. ಇದಕ್ಕೆ ಉಪನಿಷತ್, ಗೀತೆ ಅಥವಾ ಬ್ರಹ್ಮಸೂತ್ರಗಳಲ್ಲಿ ಉಲ್ಲೇಖವಿದೆಯೇ ತಿಳಿಸಿ.

**–ಆಸ್ತಿಕ್ ಸಿ.ಎಸ್** (ಇ–ಮೇಲ್ ಪತ್ರ)

*('ಶಕ್ತಿಪಾತ'ದ ವಿಷಯವಾಗಿ ಯಾವುದೋ ಗ್ರಂಥವೊಂದರಲ್ಲಿ ಓದಿದ ನೆನಪಿನಿಂದ ಉಲ್ಲೇಖಿಸಿದ್ದೇನೆ. 'ಪ್ರಸ್ಥಾನತ್ರಯ' ಗ್ರಂಥ ಗಳಲ್ಲಿ ಇದ್ದಂತೆ ತೋರುವುದಿಲ್ಲ. **–ಡಾ. ಕೆ. ಅನಂತರಾಮು**)*

ಜನವರಿ ೨೦೧೫ರ ವಿಶೇಷ ಸಂಚಿಕೆ 'ನಾಮಮಹಿಮೆ' ಅತ್ಯುತ್ತಮವಾಗಿ ಮೂಡಿಬಂದಿದೆ. ಪ್ರತಿಯೊಂದು ಲೇಖನವೂ ಚಿಂತನೆಗೆ ಹಚ್ಚುವ, ಆಧ್ಯಾತ್ಮಿಕ ವಿಚಾರಗಳಲ್ಲಿ ತೊಡಗುವಂತೆ ಮಾಡುವ, ಹಲವು ವೈಜ್ಞಾನಿಕ ವಿವರಣೆಗಳಿಂದ ಕೂಡಿದ ಮಾಹಿತಿಗಳಿಂದ ತುಂಬಿದೆ. ಈ ಸಂಚಿಕೆ ಪ್ರತಿಯೊಂದು ಗ್ರಂಥಾಲಯದಲ್ಲೂ ಅಗತ್ಯವಾಗಿ ಇರಬೇಕು. ಅದರಿಂದ ಆಸಕ್ತ ವಿದ್ಯಾರ್ಥಿಗಳಿಗೂ, ಇತರ ಓದುಗರಿಗೂ ಅನುಕೂಲವಾಗುವುದು.

**–ಡಾ. ಸರಸ್ವತಿ ನಾಗೇಂದ್ರ** , ಮೈಸೂರು

ಜನವರಿ ಸಂಚಿಕೆ ಜಪ, ಧ್ಯಾನದ ಬಗ್ಗೆ ಸಾಕಷ್ಟು ವಿಷಯಗಳನ್ನು ಹೊಂದಿದೆ. ಯಾವಾಗಲೂ ಅಧ್ಯಯನ ಮಾಡಬಹುದಾದ ಅಧ್ಯ ಯನಯೋಗ್ಯ ಸಂಚಿಕೆ ಇದು. ಇದರ ಮೂಲಕ ಅನೇಕ ವಿಷಯ ಗಳನ್ನು ತಿಳಿಯುವಂತಾಯಿತು. ಧನ್ಯವಾದಗಳು.

**–ಕೆ.ರಾಮಚಂದ್ರ** , ಭದ್ರಾವತಿ

ವಿಶೇಷ ಸಂಚಿಕೆಯ ಪುಟ ೭೭ರಲ್ಲಿ ಬಸವಣ್ಣನವರ 'ವಚನ ನಾಮಾಮೃತ'ದಲ್ಲಿ ಮುದ್ರಣದೋಷವಿದೆ. 'ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ' ಎನ್ನುವ ಬದಲು 'ಕಿವಿಯಲ್ಲಿ ನಿಮ್ಮ ನೆನಹು ತುಂಬಿ' ಎಂದು ಮುದ್ರಿತವಾಗಿದೆ. ದಯವಿಟ್ಟು ಇಂತಹ ಲೋಪ ಗಳಿಗೆ ಎಡೆಮಾಡಿ ಕೊಡಬೇಡಿ.

**–ರಾಜೀವ ಎನ್.ಮಾಗಲ್**, ಸಕಲೇಶಪುರ

*(ಇದು ಕಣ್ತಪ್ಪಿನಿಂದ ಆಗಿರುವ ತಪ್ಪು. 'ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ' ಎಂಬುದೇ ಸರಿಯಾದ ರೂಪ. ಪ್ರಮಾದಕ್ಕಾಗಿ ವಿಷಾದಿಸುತ್ತೇವೆ. –ಸಂ.)*

ತುಂಬ ಯೋಜನಾಬದ್ಧವಾಗಿ ರೂಪಿಸಿ ಹೊರತಂದ ಸಂಚಿಕೆ 'ನಾಮಮಹಿಮೆ'ಯು ಅನೇಕ ವಿಷಯಗಳನ್ನೊಳಗೊಂಡ ಜ್ಞಾನ ಭಂಡಾರವಾಗಿದೆ. ಇದಕ್ಕಾಗಿ ಅಭಿನಂದನೆಗಳು.

**–ನಳಿನಿ ಮೆನನ್** (ಇ–ಮೇಲ್ ಪತ್ರ)

ವಿಶೇಷ ಸಂಚಿಕೆಯ ಶೀರ್ಷಿಕೆಗಳು ಎಷ್ಟೊಂದು ಆಸಕ್ತಿ ಕೆರಳಿಸಿ ದವೆಂದರೆ, ಪ್ರತಿ ಕೈಸೇರಿದ ದಿನವೇ ಶೇಕಡಾ ೫೦ಕ್ಕಿಂತ ಹೆಚ್ಚನ್ನು ಓದಿ ಮುಗಿಸಿದೆ. ರೋಚಕ ಕತೆಗಳು, ಸ್ವಾರಸ್ಯಕರ ಘಟನೆಗಳು, ಚಿಂತನ–ಮಂಥನಗಳಿಂದ ಆಯೋಜಿಸಿದ ಲೇಖನಗಳು ಇಲ್ಲಿವೆ. ಹತ್ತು ಹಲವು ನೋಟಗಳುಳ್ಳ ಪತ್ರಿಕೆ ನಮ್ಮ ಬುದ್ಧಿ, ಮನ, ಹೃದಯ ಗಳಿಗೆ ಒಳ್ಳೆಯ ಟಾನಿಕ್‌ನಂತೆ ಕೆಲಸ ಮಾಡುತ್ತದೆ. ಕೃತಜ್ಞತೆಗಳು.

**–ಕೆ.ವಿ.ಸ್ವರ್ಣಗೌರಿ,** ಮೈಸೂರು

*(ಈ ಸಂಚಿಕೆಯನ್ನು ಮೆಚ್ಚಿ ಅನೇಕ ಪತ್ರಗಳು ಬಂದಿವೆ. –ಸಂ)*

# ಶ್ರೀ ಚೈತನ್ಯದೇವ



* ಭಕ್ತಿ ಹಣ್ಣಾಯಿತು ಎಂದರೆ ಅದು ಭಾವವಾಗಿ ಪರಿಣಮಿಸುತ್ತದೆ. ಅನಂತರ ಮಹಾಭಾವ, ಬಳಿಕ ಪ್ರೇಮ, ಕೊನೆಗೆ ವಸ್ತುಲಾಭ (ಭಗವಂತನ ಸಾಕ್ಷಾತ್ಕಾರ). ಗೌರಾಂಗನಿಗೆ ಮಹಾಭಾವ ಮತ್ತು ಪ್ರೇಮ ಎರಡೂ ಉಂಟಾಗಿದ್ದವು. ಪ್ರೇಮ ಉದಯವಾಯಿತು ಎಂದರೆ, ಈ ಜಗತ್ತು ಮರತೇಹೋಗಿ ಬಿಡುತ್ತದೆ. ಅಷ್ಟು ಪ್ರಿಯವಾದ ಸ್ವಂತ ದೇಹವೂ ಮರೆತುಹೋಗಿ ಬಿಡುತ್ತದೆ. ಗೌರಾಂಗನಿಗೆ ಈ ಪ್ರೇಮ ಉಂಟಾಗಿತ್ತು. ಸಮುದ್ರ ಕಣ್ಣಿಗೆ ಬಿದ್ದಾಗ, ಅದು ಯಮುನೆ ಎಂದು ಭಾವಿಸಿ ಅದಕ್ಕೇ ಧುಮುಕಿಬಿಟ್ಟ. ಸಾಮಾನ್ಯ ಜೀವರಿಗೆ ಮಹಾಭಾವವೇ ಆಗಲಿ, ಪ್ರೇಮವೇ ಆಗಲಿ ಉಂಟಾಗುವುದಿಲ್ಲ. ಅವರು ಭಾವದವರೆಗೆ ಮಾತ್ರ ಮುಂದುವರಿಯಬಲ್ಲರು, ಗೌರಾಂಗದೇವನಿಗೆ ಮೂರೂ ಉಂಟಾಗುತ್ತಿತ್ತು.

ಅಂತರ್ದಶೆಯಲ್ಲಿ ಆತ ಸಮಾಧಿಸ್ಥನಾಗಿರುತ್ತಿದ್ದ. ಅರ್ಧಬಾಹ್ಯದಶೆಯಲ್ಲಿ ನರ್ತನ ಮಾಡಲು ಮಾತ್ರ ಸಾಧ್ಯವಾಗುತ್ತಿತ್ತು. ಬಾಹ್ಯದಶೆಯಲ್ಲಿ ನಾಮಸಂಕೀರ್ತನೆ ಮಾಡುತ್ತಿದ್ದ.

* ಅವನು ಬಗೆಬಗೆಯಾಗಿ ಕ್ರೀಡಿಸುತ್ತಾನೆ – ಭಗವಲ್ಲೀಲೆ, ದೇವಲೀಲೆ, ನರಲೀಲೆ, ಜಗಲ್ಲೀಲೆ ಇತ್ಯಾದಿಯಾಗಿ. ಉದಾಹರಣೆಗೆ ಚೈತನ್ಯದೇವನನ್ನು ನೋಡು. ಕೇವಲ ಅವತಾರಪುರುಷರ ಮೂಲಕವೇ ಭಗವದ್ಭಕ್ತಿ ಮತ್ತು ಪ್ರೇಮ ಏನು ಎಂಬುದರ ರುಚಿ ನೋಡಬಹುದು. ಪ್ರೇಮಾಭಕ್ತಿಯೇ ಹಾಲು. ಹಾಲು ಹಸುವಿನ ಕೆಚ್ಚಲಿನಿಂದ ಬರುತ್ತದೆ. ಅವತಾರಪುರುಷ ಹಸುವಿನ ಕೆಚ್ಚಲು.

* ಯಾರು ಪಾಪವನ್ನು ಹರಣಮಾಡುತ್ತಾನೋ ಆತನೇ ಹರಿ. ಹರಿ ತ್ರಿತಾಪವನ್ನು ಹರಣಮಾಡುತ್ತಾನೆ. ಚೈತನ್ಯದೇವ ಹರಿನಾಮವನ್ನು ಪ್ರಚಾರ ಮಾಡಿದ; ಆದ್ದರಿಂದ ಅದು ಒಳ್ಳೆಯದೇ ಆಗಿರಬೇಕು. ನೋಡು, ಚೈತನ್ಯದೇವ ಒಬ್ಬ ದೊಡ್ಡ ಪಂಡಿತನೇ ಅಲ್ಲದೆ, ಅವತಾರಪುರುಷ ಬೇರೆ. ಆತ ಹರಿನಾಮವನ್ನು ಪ್ರಚಾರ ಮಾಡಿದ್ದರಿಂದ ಅದು ನಿಸ್ಸಂದೇಹವಾಗಿ ಒಳ್ಳೆಯದೇ ಆಗಿರಬೇಕು.

* ಒಮ್ಮೆ ಚೈತನ್ಯದೇವ ಒಂದು ಹಳ್ಳಿಯ ಮಾರ್ಗವಾಗಿ ಹೋಗುತ್ತಿದ್ದ. ಯಾರೋ ಹೇಳಿದರು, ಆ ಹಳ್ಳಿಯ ಮಣ್ಣಿನಿಂದ ಮೃದಂಗವನ್ನು ತಯಾರು ಮಾಡುತ್ತಾರೆ ಎಂದು. ಮೃದಂಗ ಎಂಬ ಶಬ್ದ ಕಿವಿಗೆ ಬಿದ್ದೊಡನೆ ಸಂಕೀರ್ತನೆಯ ನೆನಪು ಬಂದು ಭಾವಾವಿಷ್ಟನಾಗಿಬಿಟ್ಟ.

* ಏನು, ಹೆತ್ತ ತಾಯಿ ಕಸಕಡ್ಡಿಯೆ? ಚೈತನ್ಯದೇವ ಎಷ್ಟೊಂದು ತನ್ನ ತಾಯಿಗೆ ಹೇಳಿ ಮಾಡಿ ಆಕೆಯಿಂದ ಸಂನ್ಯಾಸ ಸ್ವೀಕಾರಕ್ಕೆ ಅನುಮತಿ ಪಡೆದ. ಶಚಿ (ಚೈತನ್ಯ ದೇವನ ತಾಯಿ) ಹೇಳಿದಳಂತೆ: 'ನಾನು ಕೇಶವ ಭಾರತಿಯನ್ನು (ಚೈತನ್ಯನಿಗೆ ಸಂನ್ಯಾಸ ಕೊಟ್ಟ ಯತಿ) ಕತ್ತರಿಸಿ ಹಾಕುತ್ತೇನೆ' ಎಂದು. ಚೈತನ್ಯದೇವ ಬಹಳವಾಗಿ ಆಕೆಗೆ ಬುದ್ಧಿವಾದವನ್ನು ಇತ್ತ. ಹೇಳಿದ: 'ತಾಯೆ, ನೀನು ಅನುಮತಿಯನ್ನು ಕೊಡದಿದ್ದರೆ ನಾನು ಮನೆಯನ್ನು ಬಿಟ್ಟು ಹೋಗುವುದಿಲ್ಲ. ಆದರೆ ಸಂಸಾರಿಯಾಗಲು ನನ್ನನ್ನು ನೀನು ಒತ್ತಾಯ ಮಾಡಿದೆಯೊ, ಈ ಶರೀರ ಮಾತ್ರ ಬದುಕಿರದು. ಒಂದು ಪಕ್ಷ ನೀನು ಅನು ಮತಿ ಕೊಡುವುದೆ ಆದರೆ ಇಚ್ಛೆ ಬಂದಾಗಲೆಲ್ಲ ನೀನು ನನ್ನನ್ನು ನೋಡಬಹುದು. ನಾನು ಹತ್ತಿರವೇ ಇದ್ದು, ಆಗಾಗ ಬಂದು ನಿನ್ನನ್ನು ನೋಡಿ ಹೋಗುತ್ತೇನೆ!' ಎಂದು. ಆಗ ಮಾತ್ರವೇ ಶಚಿದೇವಿ ಅನುಮತಿ ಕೊಟ್ಟಳಂತೆ.

* ಪ್ರೇಮೋನ್ಮಾದ ಭಕ್ತಿಯ ದೆಸೆಯಿಂದ ಭಕ್ತ ನಗುತ್ತಾನೆ, ಅಳುತ್ತಾನೆ, ನರ್ತಿಸುತ್ತಾನೆ, ಹಾಡುತ್ತಾನೆ. ಯಾರಿಗೇ ಆಗಲಿ ಈ ವಿಧದ ಭಕ್ತಿ ಉಂಟಾಗಿದ್ದರೆ, ನಿಶ್ಚಯವಾಗಿ ತಿಳಿದುಕೊಳ್ಳಬೇಕು ಆತನಲ್ಲಿ ಭಗವಂತ ಸ್ವಯಂ ಇದ್ದಾನೆ ಎಂದು. ಚೈತನ್ಯದೇವನಿಗೆ ಈ ವಿಧದ ಭಕ್ತಿ ಉಂಟಾಗಿತ್ತು.

* *ಶ್ರೀರಾಮಕೃಷ್ಣರು:* ಯಾರಲ್ಲಿ ಶಿವನ ಅಂಶ ಇದೆಯೋ ಅವರದು ಜ್ಞಾನಿಯ ಸ್ವಭಾವ; ಯಾರಲ್ಲಿ ವಿಷ್ಣುವಿನ ಅಂಶ ಇದೆಯೋ ಅವರದು ಭಕ್ತನ ಸ್ವಭಾವ.

*ಮಾಸ್ಟರ್:* ''ಚೈತನ್ಯದೇವನದು? ನೀವು ಹೇಳಿದ್ದೀರಿ. ಆತನದು 'ಜ್ಞಾನ ಭಕ್ತಿ ಎರಡೂ' ಅಂತ.''

*ಶ್ರೀರಾಮಕೃಷ್ಣರು:* ''ಅವನದು ಒಂದು ಪ್ರತ್ಯೇಕ ಸಮಾಚಾರ. ಆತ ಭಗವಂತನ ಅವತಾರ. ಅವನಿಗೂ ಜೀವಕ್ಕೂ ಅಜಗಜಾಂತರ ವ್ಯತ್ಯಾಸ. ಅವನದು ಎಂಥ ವೈರಾಗ್ಯ! ಸಾರ್ವಭೌಮ ಆತನ ನಾಲಗೆ ಮೇಲೆ ಸಕ್ಕರೆ ಚಿಮುಕಿಸಿದ ನಂತರ, ಆತ 'ಫೂ' ಎಂದು ಊದಿದೊಡನೆಯೆ ಎಲ್ಲಾ ಹಾರಿಹೋಗಿಬಿಟ್ಟಿತು; ಒಂದು ತುಣುಕೂ ಆತನ ನಾಲಗೆಗೆ ಅಂಟಿಕೊಂಡಿರಲಿಲ್ಲ; ಸರ್ವದಾ ಸಮಾಧಿಸ್ಥನಾಗಿರುತ್ತಿದ್ದ. ಆತ ಎಂಥ ಅದ್ಭುತ ಕಾಮಜಯಿ! ಅಂಥವನನ್ನು ಜೀವದೊಡನೆ ಹೋಲಿಸೋದು!

* ಮಹಾಪುರುಷರು ಜೀವರ ದುಃಖಗಳನ್ನು ನೋಡಿ ಸಹಿಸಲಾರದೆ ಅವರಿಗೆ ಭಗವಂತನನ್ನು ಪಡೆಯುವ ಮಾರ್ಗವನ್ನು ತೋರಿಸಿಕೊಟ್ಟುಬಿಡುತ್ತಾರೆ. ಶಂಕರಾಚಾರ್ಯರು ಲೋಕಶಿಕ್ಷಣಕ್ಕಾಗಿ, 'ವಿದ್ಯೆಯ ಅಹಂ' ಅನ್ನು ಇಟ್ಟುಕೊಂಡಿದ್ದರು. ಅನ್ನದಾನಕ್ಕಿಂತ ಜ್ಞಾನದಾನ, ಭಕ್ತಿದಾನ ಬಹಳ ಉತ್ತಮವಾದುವು. ಅದಕ್ಕಾಗಿಯೇ ಚಂಡಾಲಾದಿಯಾಗಿ ಎಲ್ಲರಿಗೂ ಚೈತನ್ಯದೇವ ಭಕ್ತಿದಾನವನ್ನು ಮಾಡಿದುದು. ❖

ಶ್ರೀರಾಮಕೃಷ್ಣ ವಚನವೇದ ದಿಂದ

# ಚೈತನ್ಯಲೀಲೆ

**'ವಿನಾಭ'**

ಶ್ರೀಕೃಷ್ಣ ಹಾಗೂ ಶ್ರೀರಾಧೆಯ ಅವತಾರವೆಂದೇ ಗುರುತಿಸಲಾಗುವ ಶ್ರೀಚೈತನ್ಯ ಮಹಾಪ್ರಭುವಿನ ಜೀವನದಲ್ಲಿ ಕಂಡುಬರುವ ಕೆಲವು ವಿಶಿಷ್ಟ ಗುಣಗಳನ್ನು ವಿಶ್ಲೇಷಿಸಿರುವ ಶ್ರೀ 'ವಿನಾಭ' (ವಿಜಯನಾಥ ಭಟ್, 'ಕೌಂಡಿನ್ಯ') ಅವರು ರಾಷ್ಟ್ರೀಕೃತ ಬ್ಯಾಂಕಿಂಗ್ ಸಂಸ್ಥೆಯೊಂದರ ಉಚ್ಚ ಅಧಿಕಾರಿಯಾಗಿದ್ದು ಈಗ ನಿವೃತ್ತರಾಗಿದ್ದಾರೆ. ಆಂಗ್ಲ, ಕನ್ನಡ ಎರಡೂ ಭಾಷೆಗಳಲ್ಲಿ, ಗದ್ಯ-ಪದ್ಯ ಎರಡೂ ಪ್ರಕಾರಗಳಲ್ಲಿ ಪರಿಣತರಾಗಿರುವ ಅವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.



ಮಹಾತ್ಮರು, ಸಾಧು ಸಂತರು, ದೇವಾಂಶಸಂಭೂತರು, ಅವತಾರ ಪುರುಷರು, ಸರ್ವಜ್ಞರು ತಮ್ಮ ಮರ್ತ್ಯಲೋಕದ ಜೀವನಾವಧಿಯಲ್ಲಿ ನುಡಿದ, ನುಡಿಯದಿರುವ ನುಡಿಗಳು, ಅವರು ನಡೆವ ನಡತೆ, ತಮ್ಮ ಸಹಚರರನ್ನು, ಅಪರಿಚಿತರನ್ನು ನಡೆಸಿಕೊಳ್ಳುವ ರೀತಿ, ನೀತಿ, ವಿಧಿ, ವಿಧಾನಗಳನ್ನು ಜನಸಾಮಾನ್ಯರು ತಮ್ಮ ಸೀಮಿತ ದೃಷ್ಟಿ, ಬುದ್ಧಿ ಮತ್ತು ತರ್ಕಗಳ ಚೌಕಟ್ಟಿನಲ್ಲಿ ಅರ್ಥೈಸಿಕೊಳ್ಳುವುದು ಬಲು ಕಷ್ಟ. ಕಷ್ಟವೇ ಏಕೆ, ಬಹಳಷ್ಟು ಸಲ ಅದು ಅಸಾಧ್ಯವೂ ಹೌದು. ಬುದ್ಧನಿರಲಿ, ಕ್ರಿಸ್ತನಿರಲಿ, ಶ್ರೀರಾಮನೇ ಇರಲಿ, ಶ್ರೀಕೃಷ್ಣನೇ ಇರಲಿ, ಶ್ರೀರಾಮಕೃಷ್ಣರೇ ಇರಲಿ ಅವರ ಸಾಮಾನ್ಯ ನುಡಿಗಳಿಗೂ – ಮೌನದ ಪ್ರತಿಕ್ರಿಯೆಗಳಿಗೂ – ಹತ್ತಾರು ಅರ್ಥಗಳು: ವ್ಯಕ್ತ, ಅವ್ಯಕ್ತ, ಸೂಚ್ಯ, ಗಹನ, ಗುಹ್ಯ ಹೀಗೆ. ಒಂದೇ ಎಂದು ನಮಗೆ ಕಾಣಬಹುದಾದ ಸಂದರ್ಭಗಳಲ್ಲೂ ಅವರು ನೀಡುವ ಪ್ರತಿಕ್ರಿಯೆ, ಒಂದೇ ವ್ಯಕ್ತಿಯನ್ನು ವಿವಿಧ ಸಂದರ್ಭಗಳಲ್ಲಿ ಅವರು ಸಂಬೋಧಿಸುವ, ಪ್ರೀತಿ ಆಕ್ರೋಶ, ಅಸಮಾಧಾನಗಳನ್ನು ವ್ಯಕ್ತಪಡಿಸುವ, ತಿದ್ದುವ, ಶಿಕ್ಷಿಸುವ, ಸಮಜಾಯಿಸುವ ರೀತಿ ನೀತಿಗಳು ಬಹಳಷ್ಟು ಸಂದರ್ಭದಲ್ಲಿ ಅತಾರ್ಕಿಕ, ಅನುಚಿತ, ಅಸಮಂಜಸ ಮತ್ತು ವಿರೋಧಾಭಾಸಗಳಿಂದ ಲೇಪಿತವಾದಂತೆ ಕಾಣುವುದು ಅಚ್ಚರಿಯ ಮಾತೇನಲ್ಲ. ಇಂತಹ ವಿಪರೀತಗಳನ್ನು ನಾವು ಅರ್ಥೈಸಿಕೊಳ್ಳಬೇಕಾದರೆ ಒಂದೋ ಅವರಂತಹ ಇನ್ನೊಬ್ಬ ಅನುಭಾವಿಗಳು ಅದನ್ನು ವಿಸ್ತರಿಸಿ ನಮಗೆ ತಿಳಿಹೇಳಬೇಕು ಅಥವಾ ಅವರೇ ನಮ್ಮ ಅರಿವಿನ ಮಟ್ಟಕ್ಕೆ ಇಳಿದು ನಮಗೆ ವಿವರವಾಗಿ ಬೋಧಿಸಿರಬೇಕು. ಏಕೆಂದರೆ, ನಮ್ಮೆಲ್ಲರಿಗೂ ಅವರ ಮಟ್ಟಕ್ಕೆ ಏರಿ, ಅಂತಹ ಅರಿವನ್ನು ಪಡೆಯಲು ಬೇಕಾದ ಅನುಭವ ಅಥವಾ ಅನುಭಾವವನ್ನು ನಮ್ಮದಾಗಿಸಿಕೊಳ್ಳುವುದಕ್ಕೆ ಒಂದು ಜನ್ಮವೂ ಸಾಕಾಗದಿರಬಹುದು.

ಶ್ರೀಚೈತನ್ಯ ಮಹಾಪ್ರಭುಗಳ ಜೀವನಗಾಥೆಯೂ ವಿಪುಲವಾಗಿ ಅಂತಹ ವಿಪರೀತ ಸನ್ನಿವೇಶಗಳಿಂದ ತುಂಬಿದೆ. ಅವರು ತಮ್ಮ ಅನುಯಾಯಿಗಳ ಅಥವಾ ವಿರೋಧಿಗಳ ಎಂತಹ ಅಕ್ಷಮ್ಯ ಅಪರಾಧಗಳನ್ನು ಎಷ್ಟು ಲೀಲಾಜಾಲವಾಗಿ ಕ್ಷಮಿಸಬಲ್ಲರೋ, ಅಷ್ಟೇ ನಿರ್ದಯವಾಗಿ ದಂಡಿಸಬಲ್ಲರೂ ಕೂಡಾ. ಒಮ್ಮೆ ತನು, ಮನ, ವಿಷಯಗಳ ಸ್ವಚ್ಛತೆಯ ಪಾರಮ್ಯಕ್ಕೆ ಬದ್ಧರಾದರೆ, ಮರುಕ್ಷಣದಲ್ಲೇ ಭೌತಿಕವಾಗಿ ಅಸಹ್ಯವಾದುದನ್ನು ಯಾವ ಮುಜುಗರವೂ ಇಲ್ಲದೆ ಆತ್ಮೀಯವಾಗಿ ತಬ್ಬಿಕೊಳ್ಳಬಲ್ಲರು. ಒಮ್ಮೆ ಗುಡುಗಿನಂತೆ ಕಠೋರವಾಗಿ ಆದೇಶಿಸಬಲ್ಲರಾದರೆ ಮರುಕ್ಷಣದಲ್ಲೇ ಕಾಡಿ, ಹಸುಳೆಯಂತೆ ಬೇಡಿ ಒಲಿಸಿಕೊಂಡಾರು. ಒಮ್ಮೆ ತನ್ನ ಪ್ರಭಾವಲಯದೊಳಗೆ ಬಂದ ಅಪಾತ್ರರನ್ನು ಅವಜ್ಞೆಯಿಂದ ಎಚ್ಚರಿಸಿ ಉದ್ಧರಿಸಬಲ್ಲರಾದರೆ, ಮರುಕ್ಷಣದಲ್ಲೇ ಯಾವ ಬಾಹ್ಯ ಪ್ರಚೋದನೆಯೂ ಇಲ್ಲದೆ ತಮ್ಮ ಬಾಹ್ಯಪ್ರಜ್ಞೆಯನ್ನು ಕಳೆದುಕೊಂಡು, ಅಸಹಾಯಕರಂತೆ ತಮ್ಮ ಸಹಚರರನ್ನು ಇಕ್ಕಟ್ಟಿಗೆ ಸಿಲುಕಿಸಿಯಾರು. ಅದಕ್ಕೆಂದೇ ಅಂತಹ ಮಹಾಮಹಿಮರ ಸಂಕೀರ್ಣ ಜೀವನಕ್ರಮವನ್ನು 'ಲೀಲೆ'ಯೆಂದು ವರ್ಗೀಕರಿಸಲಾಗುತ್ತದೆ.

ಚೈತನ್ಯರ ನಿಚ್ಚಳ ನಿಷ್ಕಾಪಟ್ಯ, ಅವರ ಅಧ್ಯಾತ್ಮಿಕ ವ್ಯಕ್ತಿತ್ವದ ಆಕರ್ಷಣ ಶಕ್ತಿ ಕೆಲವು ವೇಳೆ ದುರ್ಜನರ ಮೇಲೂ ಗಂಭೀರ ಸಕಾರಾತ್ಮಕ ಪ್ರಭಾವವನ್ನು ಬೀರುತ್ತಿತ್ತು. ಜಗಾಯ್ ಮತ್ತು ಮಾಧಾಯ್ ಎಂಬ ಇಬ್ಬರು ದುರುಳರ ಸಂಗತಿ ಇದಕ್ಕೊಂದು ನಿದರ್ಶನ. ಶ್ರೀಚೈತನ್ಯರು ಆಗ ನವದ್ವೀಪದಲ್ಲಿದ್ದರು. ಈ ಇಬ್ಬರೂ ತಮ್ಮ ದುಷ್ಕೃತ್ಯಗಳಿಗೂ, ಕ್ರೌರ್ಯಕ್ಕೂ ಕುಪ್ರಸಿದ್ಧರಾಗಿದ್ದರು. ಒಂದು ದಿನ ಅವರು ಕುಡಿತದ ಅಮಲಿನಲ್ಲಿ ಚೈತನ್ಯ ಹಾಗೂ ಅವರು 'ಬೋಡೋದಾದಾ' ಎಂದು ಗೌರವಿಸುತ್ತಿದ್ದ ನಿತ್ಯಾನಂದರ ಮೇಲೆ ವಿನಾಕಾರಣ ಕೈ ಮಾಡಿದರು. ಮದ್ಯದ ಕುಡಿಕೆಯಿಂದಲೇ ಹೊಡೆಸಿಕೊಂಡ ನಿತ್ಯಾನಂದರ ಹಣೆಗೆ ಘಾಸಿಯಾಗಿ ರಕ್ತ ಸುರಿಯಲಾರಂಭಿಸಿತು. ಹೀಗೆ ಹೀನಾಯ ಕ್ರೌರ್ಯಕ್ಕೆ ಒಳಗಾದ ಚೈತನ್ಯ ನಿತ್ಯಾನಂದರು ತಮ್ಮನ್ನು ಅಪ್ರಚೋದಿತವಾಗಿ ಹಿಂಸಿಸಿದ ಆ ಘಾತುಕರೀರ್ವರಲ್ಲೂ ಪ್ರೀತಿಯನ್ನು ಕರುಣೆಯನ್ನು ತೋರಿದರು. ಫಲವಾಗಿ ಆ ದುಷ್ಟರಿಬ್ಬರಲ್ಲೂ ಅದ್ಭುತ ಪರಿವರ್ತನೆಯಾಗಿ,

ಕಾಲಾನುಕ್ರಮೇಣ ಅವರು ವಿನಯ ಮತ್ತು ನಮ್ರತೆಯಲ್ಲಿ ಇತರರಿಗೆ ಮಾದರಿಯಾಗಿ ಮೂಡಿಬಂದರು.

* * *

ಒಂದು ದಿನ ಭಿಕ್ಷೆಯನ್ನು ಸ್ವೀಕರಿಸಿದ ಮೇಲೆ ಚೈತನ್ಯದೇವರು ಮುಖಶುದ್ಧಿಯನ್ನು ಕೇಳಿದಾಗ, ಗೋವಿಂದ ಘೋಷ್ ಎಂಬ ಒಬ್ಬ ತ್ಯಾಗಿ ಸೇವಕ ಊರಿಗೆ ಹೋಗಿ ಭಿಕ್ಷೆ ಬೇಡಿ, ಒಂದು ಅಳಲೇ ಕಾಯಿಯನ್ನು ತಂದನು. ಅದನ್ನು ಕತ್ತರಿಸಿ, ಅರ್ಧಭಾಗವನ್ನು ಚೈತನ್ಯದೇವರ ಕೈಯಲ್ಲಿ ಕೊಟ್ಟು ಉಳಿದರ್ಧವನ್ನು ತನ್ನ ಬಟ್ಟೆಯ ತುದಿಯಲ್ಲಿ ಕಟ್ಟಿಕೊಂಡನು. ಮರುದಿನ ಭಿಕ್ಷಾಗ್ರಹಣವಾದ ಮೇಲೆ ಪುನಃ ಮುಖಶುದ್ಧಿಯ ಆವಶ್ಯಕತೆ ಬಿದ್ದಾಗ, ಆ ಸೇವಕನು ಮುನ್ನಾದಿನ ಉಳಿಸಿದ ಅಳಲೆಕಾಯಿ ತುಂಡನ್ನು ಚೈತನ್ಯದೇವರ ಕೈಗಳಲ್ಲಿ ಕೊಟ್ಟನು. ಇದರಿಂದ ಚೈತನ್ಯದೇವರಿಗೆ ಸಂದೇಹವಾಗಿ ಅವರು, ''ಗೋವಿಂದ, ಇಂದು ಇಷ್ಟು ಬೇಗ ಅಳಲೇಕಾಯಿ ಎಲ್ಲಿ ಸಿಕ್ಕಿತು?'' ಎಂದು ಕೇಳಿದರು. ಗೋವಿಂದನು, ''ನಿನ್ನೆಯ ಅಳಲೆ ಕಾಯಿಯ ಅರ್ಧಭಾಗವನ್ನು ಬಟ್ಟೆಯಲ್ಲಿ ಕಟ್ಟಿ ಇಟ್ಟಿದ್ದೆ'' ಎಂದು ಸತ್ಯವನ್ನೇ ಹೇಳಿದ. ಸರ್ವತ್ಯಾಗಿಯಾದ ಚೈತನ್ಯದೇವರು ಗೋವಿಂದನನ್ನು ಏಕಾಂತದಲ್ಲಿ ಕರೆದು, ''ನೋಡು, ತ್ಯಾಗ ಮಾರ್ಗದಲ್ಲಿ ನಡೆಯುವುದು ಬಹಳ ಕಷ್ಟಕರವಾದದು. ನನಗನ್ನಿಸುತ್ತದೆ, ಭಗವಂತನಲ್ಲಿ ಪೂರ್ಣ ನಿರ್ಭರನಾಗದೆ ಆತ್ಮರಕ್ಷಣೆಗಾಗಿ ಸಂಚಯ ಮಾಡುವ ಭಾವ ನಿನ್ನೊಳಗೆ ಈಗಲೂ ಇದೆ. ಆದ್ದರಿಂದ ನೀನು ತ್ಯಾಗಮಾರ್ಗವನ್ನು ಬಿಟ್ಟು ಸಂಚಯದ ಮಾರ್ಗವನ್ನು ನಿನ್ನದಾಗಿಸಿಕೊ, ನೀನು ಗೃಹಸ್ಥಾಶ್ರಮವನ್ನು ಪ್ರವೇಶಮಾಡು'' ಎಂದು ಆದೇಶಿಸಿದರು. ಗೋವಿಂದನು ತನ್ನ ತಪ್ಪಿಗಾಗಿ ಪಶ್ಚಾತ್ತಾಪಪಡುತ್ತಾ ಅವರ ಚರಣಗಳಲ್ಲಿ ಮತ್ತೆ ಮತ್ತೆ ಬಿದ್ದು ಅಳತೊಡಗಿದರೂ, ಚೈತನ್ಯದೇವರು ಅವರಿಗೆ ಸ್ನೇಹ, ವಾತ್ಸಲ್ಯದಿಂದ ಭರವಸೆ ತುಂಬುತ್ತ ಅವನನ್ನು ಗೃಹಸ್ಥ ಧರ್ಮಕ್ಕೆ ತಳ್ಳಿದರು.

* * *

ಆದರ್ಶ ಸನ್ಯಾಸಿ ಚೈತನ್ಯದೇವರು ಹೇಗೆ ಸ್ವಯಂ ಕಾಮಿನಿ, ಕಾಂಚನಗಳಿಂದ ದೂರವಿರುತ್ತಿದ್ದರೋ ಹಾಗೆಯೇ ಅವರ ತ್ಯಾಗಿ ಭಕ್ತರೂ ಆ ಆದರ್ಶವನ್ನು ಪೂರ್ಣವಾಗಿ ಪರಿಪಾಲಿಸುತ್ತಾರೋ ಇಲ್ಲವೋ ಎಂಬ ವಿಷಯವಾಗಿ ತೀಕ್ಷ್ಣ ದೃಷ್ಟಿಯನ್ನಿರಿಸಿದ್ದರು.

ಹರಿದಾಸ ಎಂಬ ಒಬ್ಬ ಸಂಸಾರ ತ್ಯಾಗಿ ಬಂಗಾಳಿ ಯುವಕ ಚೈತನ್ಯದೇವರ ಆಶ್ರಯದಲ್ಲಿ ಪುರಿಯಲ್ಲಿ ವಾಸಿಸುತ್ತ ಸತ್ಸಂಗ ಮತ್ತು ಸಾಧನೆ ಭಜನೆಯನ್ನು ಮಾಡುತ್ತಿದ್ದನು. ಚೈತನ್ಯರ ಭಕ್ತ ವರ್ತುಲದಲ್ಲಿ ಅವನು ಚಿಕ್ಕ ಹರಿದಾಸನೆಂದೇ ಪರಿಚಿತನಾಗಿದ್ದನು. ಅವನು ಚೈತನ್ಯದೇವರಿಗೆ ಪ್ರಿಯನೂ ಆದರಣೀಯನೂ ಆಗಿದ್ದನು. ಒಮ್ಮೆ ಭಕ್ತ ಭಾಗವತಾಚಾರ್ಯರು ಚೈತನ್ಯದೇವರ ಸಂಗಲಾಭ ಪಡೆಯಲು ಪುರೀಧಾಮಕ್ಕೆ ಬಂದು ಕೆಲಕಾಲ ವಾಸಿಸಿದ್ದರು. ಒಂದು ದಿನ ಅವರಿಗೆ ತನ್ನ ಕೈಯಿಂದಲೇ ಬೇಯಿಸಿ ತಯಾರಿಸಿದ ಭಿಕ್ಷೆಯನ್ನು ಚೈತನ್ಯದೇವರಿಗೆ ನೀಡುವ ಇಚ್ಛೆಯಾಯಿತು. ಅದಕ್ಕಾಗಿ ಅವರು ಅಗತ್ಯವಿರುವ ಸಾಮಗ್ರಿಗಳನ್ನು ಒಟ್ಟುಗೂಡಿಸತೊಡಗಿದರು. ಉತ್ತಮ ದರ್ಜೆಯ ಅಕ್ಕಿ ಸುಲಭವಾಗಿ ದೊರಕದಿದ್ದಾಗ ಅವರು ಅದನ್ನು ಹೊಂದಿಸಿಕೊಡಲು ಚಿಕ್ಕ ಹರಿದಾಸರಿಗೆ ಹೇಳಿದರು. ಅವನು ಪುರಿಯ, ಚೈತನ್ಯದೇವರ ಪರಮ ಭಕ್ತ ಶಿಖಿ ಮಾಹಿತಿಯ ಮನೆಗೆ ಹೋಗಿ, ಅವರ ತಂಗಿ ಮಾಧವೀದಾಸಿಯಿಂದ ಭಿಕ್ಷೆಯ ರೂಪದಲ್ಲಿ ಸ್ವಲ್ಪ ಸುಗಂಧವುಳ್ಳ ಅಕ್ಕಿಯನ್ನು ಪಡೆದು ತಂದನು. ಭಾಗವತಾಚಾರ್ಯರು ಅದೇ ಸುಗಂಧಪೂರಿತ ಅಕ್ಕಿಯಿಂದ ಅನ್ನವನ್ನು ತಯಾರಿಸಿ ವಿವಿಧ ಬಗೆಯ ಸ್ವಾದಿಷ್ಟ ಭೋಜನವನ್ನು ಅಣಿಗೊಳಿಸಿ, ಚೈತನ್ಯದೇವರನ್ನು ಭಿಕ್ಷೆಗೆ ಆಹ್ವಾನಿಸಿ, ತನ್ನ ಕೈಯಾರೆ ಪ್ರೀತಿಯಿಂದ ಉಣಬಡಿಸಿದರು. ಬಡಿಸಿದ ಎಲ್ಲ ಖಾದ್ಯಗಳನ್ನು ಆಸ್ವಾದಿಸಿದ ಚೈತನ್ಯದೇವರು ಅತ್ಯಂತ ಸಂತುಷ್ಟರಾಗಿ, ಅಂತಹ ಒಳ್ಳೆಯ ಸಣ್ಣಕ್ಕಿಯನ್ನು ಹೇಗೆ ಸಂಪಾದಿಸಿದರೆಂದು ಆಚಾರ್ಯರನ್ನು ಕೇಳಿದರು. ಅವರು ಚಿಕ್ಕ ಹರಿದಾಸನು ಮಾಧವೀದಾಸಿಯ ಬಳಿ ಭಿಕ್ಷೆಬೇಡಿ ತಂದ ವಿಚಾರವನ್ನು ತಿಳಿಸಿದರು. ಚೈತನ್ಯ ದೇವರು ಅಕ್ಕಿಯನ್ನು ಪ್ರಶಂಸಿಸಿದರಾದರೂ, ಭಿಕ್ಷೆಯಾದ ಮೇಲೆ ಕುಟಿಗೆ ಮರಳಿ ತಮ್ಮ ಸೇವಕ ಗೋವಿಂದನಿಗೆ ಗಂಭೀರವಾಗಿ, ''ಇಂದಿನಿಂದ ಚಿಕ್ಕ ಹರಿದಾಸನನ್ನು ಇಲ್ಲಿ ಬರಲು ಬಿಡಬೇಡ'' ಎಂದು ಆದೇಶಿಸಿದರು.

ತ್ಯಾಗಿ-ವಿರಾಗಿ ಹರಿದಾಸನು ಮಾಧವೀದಾಸಿಯ ಹತ್ತಿರ ಹೋಗಿ ಬರುವುದು, ಅವಳೊಂದಿಗೆ ಮಾತುಕತೆಯಾಡುವುದು ಚೈತನ್ಯದೇವರಿಗೆ ಘೋರ ಅಪರಾಧವೆನಿಸಿತ್ತು. ಆದ್ದರಿಂದ ಅವರ ಮೂಲಕ ಎಲ್ಲರಿಗೂ ಶಿಕ್ಷಣ ನೀಡಲೆಂದು ಹರಿದಾಸನಿಗೆ ಅವರು ಅಷ್ಟು ಕಠೋರವಾದ ದಂಡನೆಯನ್ನು ವಿಧಿಸಿದ್ದರು.

ಗೋವಿಂದರಿಂದ ಚೈತನ್ಯದೇವರ ಈ ಕಠಿಣ ಆದೇಶವನ್ನು ಕೇಳಿ ಹರಿದಾಸನ ಪ್ರಾಣವೇ ಹಾರಿ ಹೋದಂತಾಯಿತು. ಬಹಳ ವಿನಂತಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಹತಾಶನೂ ದುಃಖಿತನೂ ಆದ ಹರಿದಾಸನು ತನ್ನ ಮನೆಗೆ ಮರಳಿ, ಬಾಗಿಲನ್ನು ಒಳಗಿನಿಂದ ಅಗುಳಿ ಹಾಕಿ, ಉಪವಾಸ ಮಾಡುತ್ತಾ ಬಿದ್ದುಕೊಂಡನು. ಇದನ್ನರಿತ ಕೆಲವು ಭಕ್ತರು ಚೈತನ್ಯರನ್ನು ಸಮೀಪಿಸಿದರು. ಅವರು ಇಡೀ ಘಟನೆಯನ್ನು ವಿವರಿಸುತ್ತಾ, ಕೋಪದಿಂದ ತನ್ನ ಆದೇಶವನ್ನು ಮರುಪರಿಶೀಲಿಸಲು ನಿರಾಕರಿಸಿದರು. ಭಕ್ತರು, ''ಅವನಿಗೆ ಸಾಕಷ್ಟು ಶಿಕ್ಷೆ ಈಗಲೇ ಆಗಿದೆ. ಇನ್ನು ಆತ ಎಂದಿಗೂ ಇಂತಹ ತಪ್ಪನ್ನು ಮಾಡಲಾರ. ಅವನನ್ನು ಈ ಒಂದುಬಾರಿ ಕ್ಷಮಿಸಿ'' ಎಂದು ಗೋಗರೆದರೂ ಯಾವುದೇ ಪ್ರಯೋಜನವಾಗಲಿಲ್ಲ.

ಹರಿದಾಸ ಮೂರು ದಿನಗಳ ಅನಶನದ ನಂತರ ಕರುಣಾಜನಕ ಸ್ಥಿತಿಯನ್ನು ತಲುಪಿದಾಗ, ಚೈತನ್ಯದೇವರಿಗೆ ಅತ್ಯಂತ ಶ್ರದ್ಧೆಯುಳ್ಳ ಶ್ರೀಮತ್ ಸ್ವಾಮಿ ಪರಮಾನಂದ ಪುರಿಯವರು ಚೈತನ್ಯದೇವರ ಮನಪರಿವರ್ತನೆಗಾಗಿ ಯತ್ನಿಸಿದರು. ಅವರಿಗೆ ಚೈತನ್ಯದೇವರು ಯೋಗ್ಯ ಗೌರವ, ಸತ್ಕಾರಗಳನ್ನು ನೀಡಿದರೂ, ''ನಿಮಗೆ ನನ್ನ ದೆಸೆಯಿಂದ ನೋವಾಗಿದ್ದರೆ ನಾನೇ ಪುರಿಯನ್ನು ಬಿಟ್ಟು ಹೋಗುತ್ತೇನೆ''

ಎಂದು ತಮ್ಮ ನಿರ್ಧಾರವನ್ನು ಪ್ರಕಟಿಸಿದರಲ್ಲದೆ, ಹರಿದಾಸನ ಬಗೆಗಿನ ತಮ್ಮ ನಿರ್ಣಯವನ್ನು ಬದಲಿಸಲು ಸುತರಾಂ ಒಪ್ಪಲಿಲ್ಲ.

ಇದರಿಂದ ನೊಂದ ಹರಿದಾಸ ತಾನೇ ಯಾರಿಗೂ ಹೇಳದೆ, ಕೇಳದೆ ಯಾತ್ರಾರ್ಥಿಯಾಗಿ ಉತ್ತರ-ಪಶ್ಚಿಮದೆಡೆಗೆ ನಡೆದುಕೊಂಡು ಹೊರಟನು. ಅಂತಿಮವಾಗಿ ಅವನು ಮಹಾಪ್ರಭುವಿನ ಧ್ಯಾನ ಮತ್ತು ಇಷ್ಟಮಂತ್ರ ಸ್ಮರಣೆಯನ್ನು ಮಾಡುತ್ತಾ ತ್ರಿವೇಣೀ ಸಂಗಮದಲ್ಲಿ ತನ್ನ ಆತ್ಮಸಮರ್ಪಣೆಯನ್ನು ಮಾಡಿಕೊಂಡನು.

ಈ ವಿಷಯ ತಿಳಿದುಬಂದಾಗ ಚೈತನ್ಯದೇವರಿಗೆ ಬಹಳ ದುಃಖವಾದರೂ, ''ನಾರಿಯ ದರ್ಶನ ಮಾಡಿದ್ದಕ್ಕೆ ಇದೇ ಪ್ರಾಯಶ್ಚಿತ್ತ'' ಎಂದು ಉದ್ಗರಿಸಿದರಲ್ಲದೆ, ಅವನಿಗೆ ಈಗಲೂ ಕ್ಷಮಿಸುವ ಕೃಪೆಯನ್ನು ಅವರು ಮಾಡಲಿಲ್ಲ. ಹರಿದಾಸನ ಈ ಘಟನೆಯಿಂದ ಎಲ್ಲರಿಗೂ ಎಂತಹ ಶಿಕ್ಷಣ ದೊರೆಯಿತೆಂದರೆ ಇತರ ಭಕ್ತರು ಸ್ವಪ್ನದಲ್ಲೂ ನಾರಿಯರೊಡನೆ ಸಂಭಾಷಣೆ ಮಾಡುವ ಆಸೆಯನ್ನಾಗಲೀ ಸಾಹಸವನ್ನಾಗಲೀ ಮಾಡಲಿಲ್ಲ.

* * *

ಒಮ್ಮೆ ಚೈತನ್ಯದೇವರ ಆದೇಶದಂತೆ ವ್ರಜಭೂಮಿಯಲ್ಲಿ ವಾಸವಿದ್ದ ಸನಾತನರಿಗೆ ಪುರಿಗೆ ಪಯಣಿಸಿ ಮಹಾಪ್ರಭುವನ್ನು ನೋಡುವ ಪ್ರಬಲ ಇಚ್ಛೆ ಉದಿಸಿತು. ಅವರು ಬಹಳ ಕಷ್ಟಪಟ್ಟು ದುರ್ಗಮವಾದ ರಸ್ತೆಗಳನ್ನು ಕ್ರಮಿಸಿ, ದಾರಿಯಲ್ಲಿ ತಿನ್ನಲುಣಲೂ ಸಾಕಷ್ಟು ಸಿಗದೆ, ಪುರಿಯನ್ನು ತಲಪುವಾಗ ಅವರ ಆರೋಗ್ಯ ತೀವ್ರ ಹಾನಿಗೊಳಗಾಯಿತು. ನೀರು-ಗಾಳಿಗಳ ದೋಷದಿಂದ ಅವರ ರಕ್ತ ಕಲುಷಿತವಾಗಿ ಅವರ ಶರೀರದಲ್ಲಿ ಅಸಾಧ್ಯ ತುರಿಕೆಯುಂಟಾಯಿತು. ಕ್ರಮೇಣ ಅವರ ಕೃಶ ಶರೀರವು ವ್ರಣ ಮತ್ತು ಕೀವುಗಳಿಂದ ತುಂಬಿ ಹೋಯಿತು. ಈ ಅಶುದ್ಧ ಮತ್ತು ರೋಗಗ್ರಸ್ತ ಶರೀರವನ್ನು ಚೈತನ್ಯದೇವರ ಹತ್ತಿರ ತೆಗೆದುಕೊಂಡು ಹೋಗುವುದಕ್ಕೆ ಅಂಜಿದ ಅವರು ಅದಾಗಲೇ ಹತ್ತಿರ ಬರುತ್ತಿರುವ ರಥಯಾತ್ರೆಯಂದು ಜಗನ್ನಾಥನ ರಥದ ಚಕ್ರದ ಕೆಳಗೆ ದೇಹತ್ಯಾಗ ಮಾಡಲು ಸಂಕಲ್ಪಿಸಿದರು.

ಅದಾಗಲೆ ಜಗನ್ನಾಥ ಮಂದಿರದಿಂದ ಹಿಂತಿರುಗುತ್ತಿದ್ದ ಚೈತನ್ಯದೇವರ ದರ್ಶನ ಅವರಿಗಾಯಿತು. ಭಾವಾವಿಹಲ್ವರಾದ ಸನಾತನರು ಅವರನ್ನು ದೂರದಿಂದಲೇ ನೋಡಿ ಭೂಮಿಯ ಮೇಲೆ ದಂಡವತ್ ಪ್ರಣಾಮ ಮಾಡಿದರು. ಸನಾತನರನ್ನು ನೋಡಿದ ಮಹಾಪ್ರಭುಗಳು ಪ್ರಫುಲ್ಲಿತರಾಗಿ ತಮ್ಮೆರಡು ಬಾಹುಗಳನ್ನು ಸೆಟೆದು ಸನಾತನರ ಆಲಿಂಗನಗೈಯಲು ಮುಂದೆ ಬಂದರು. ಸನಾತನರು ಮಾತ್ರ ಹಿಂದಕ್ಕೆ ಓಡುತ್ತ, ''ಪ್ರಭು, ನಾನು ನಿಮ್ಮ ಚರಣಗಳಲ್ಲಿ ಬೀಳುತ್ತೇನೆ. ದಯವಿಟ್ಟು ನನ್ನನ್ನು ಸ್ಪರ್ಶಿಸಬೇಡಿ. ಒಂದೆಡೆ ನಾನು ನೀಚ ಮತ್ತು ಅಧಮ ಜಾತಿಯವನು. ಇನ್ನೊಂದೆಡೆ ನನ್ನ ಶರೀರದಲ್ಲಿ ಕೀವು ತುಂಬಿಕೊಂಡಿದೆ'' ಎಂದು ಚೀತ್ಕರಿಸಿದನು. ಆದರೆ ಚೈತನ್ಯದೇವರು ಇದಾವುದನ್ನೂ ಪರಿಗಣಿಸದೆ ಮುಂದೆ ಬಂದು ಸನಾತನರನ್ನು ಎದೆಗಪ್ಪಿಕೊಂಡರು. ಸನಾತನರಿಗೆ ಕಡುದುಃಖವಾದರೆ, ಚೈತನ್ಯದೇವರ ಮುಖ ಮಂದಹಾಸದಿಂದ ಮಿನುಗಿತು.

ಹೀಗೆಯೇ ಆತ್ಮಸಮರ್ಪಣೆಗೆ ನಿರ್ಧರಿಸಿ ರಥಯಾತ್ರೆಗಾಗಿ ಕಾಯುತ್ತಿದ್ದ ಸನಾತನರನ್ನು ಉದ್ದೇಶಿಸಿ ಗಂಭೀರವಾಣಿಯಿಂದ, ''ಸನಾತನ, ದೇಹತ್ಯಾಗದಿಂದ ಕೃಷ್ಣಪ್ರಾಪ್ತಿಯಾಗುವುದಿಲ್ಲ. ಹಾಗೇನಾದರೂ ಆಗುವುದಿದ್ದರೆ ನಾನು ಕ್ಷಣದಲ್ಲಿ ಕೋಟಿ ಬಾರಿ ದೇಹತ್ಯಾಗ ಮಾಡುತ್ತಿದ್ದೆ. ದೇಹತ್ಯಾಗ ತಮೋಧರ್ಮ. ಅಂತಹ ಕುಬುದ್ಧಿಯನ್ನು ಬಿಟ್ಟು ಶ್ರವಣ-ಕೀರ್ತನೆಯಲ್ಲಿ ಮನಸ್ಸನ್ನು ತೊಡಗಿಸು'' ಎಂದಾಗ ಸನಾತನರಿಗೆ ಆಶ್ಚರ್ಯವೋ ಆಶ್ಚರ್ಯ. ಇಂತಹ ಉಪದೇಶದಿಂದ ಪರಿವರ್ತಿತರಾದ ಸನಾತನರು ದೇಹತ್ಯಾಗದ ಸಂಕಲ್ಪವನ್ನು ತೊರೆದು ಚೈತನ್ಯದೇವರ ಚರಣಗಳಲ್ಲಿ ತನ್ನನ್ನು ಸಮರ್ಪಿಸಿಕೊಂಡರು. ಅವರ ದೇಹದಲ್ಲಿ ಇನ್ನೂ ತುರಿಕೆ ಕೀವುಗಳಿದ್ದರೂ ಚೈತನ್ಯದೇವರು ಅವರನ್ನು ನೋಡುತ್ತಲೇ ಪ್ರೇಮಾಲಿಂಗನಗೈಯುತ್ತಿದ್ದರು. ''ನಿನ್ನ ಶರೀರದ ರಕ್ತ, ಕೀವು ನಿನಗೆ ತುಚ್ಛವೆನಿಸಬಹುದು, ಆದರೆ ನನಗದು ಚಂದನಕ್ಕೆ ಸಮಾನ'' ಎನ್ನುತ್ತಿದ್ದರು.

ಚೈತನ್ಯದೇವರ ವಾತ್ಸಲ್ಯ-ಆಶೀರ್ವಾದ, ಭಕ್ತರ ಸೇವೆ ಮತ್ತು ಪುರಿಯ ನೀರು-ಗಾಳಿಗಳ ಗುಣವಿಶೇಷದಿಂದ ಸನಾತನರ ಶರೀರ ಕ್ರಮೇಣ ನಿರೋಗಿಯಾಗತೊಡಗಿತು. ಆದರೂ ಅವರು ಮಂದಿರದ ಪೂಜಾರಿ ಮತ್ತು ಸೇವಕರ ಅಂಗಕ್ಕೆ ತನ್ನ ದೇಹ ಅಥವಾ ನೆರಳಿನ ಸ್ಪರ್ಶದಿಂದ ಅಪಚಾರವಾದೀತೆಂಬ ಭಯದಿಂದ ಮಂದಿರದೆದುರು ಓಡಾಡಲೂ ಹಿಂಜರಿಯುತ್ತಿದ್ದರು.

* * *

ಚೈತನ್ಯದೇವರ ಸಂಗದಲ್ಲಿದ್ದ ಭಕ್ತರಲ್ಲಿ ಸೇನಾಪತಿ ರಘುನಾಥರು ಒಬ್ಬರು. ಕಠೋರ ವಿರಾಗಿಗಳಾದ ಅವರು ಜಗನ್ನಾಥ ಮಂದಿರದ ಸಿಂಹದ್ವಾರದಲ್ಲಿ ನಿಂತು ದಾನವಾಗಿ ಸಿಕ್ಕಿದ ಭಿಕ್ಷೆಯಿಂದ ದೇಹಧಾರಣೆ ಮಾಡುತ್ತಿದ್ದನು. ಕೆಲಕಾಲವಾದ ಮೇಲೆ ಅವರಿಗೆ ಲೋಕಸಂಗವನ್ನು ಪೂರ್ಣವಾಗಿ ತೊರೆಯಬೇಕೆಂಬ ಇಚ್ಛೆಯಾಗಿ ಭಿಕ್ಷೆಯ ಅನ್ನಗ್ರಹಣವನ್ನು ಮಾಡುವುದನ್ನೂ ನಿಲ್ಲಿಸಿಬಿಟ್ಟರು. ಜಗನ್ನಾಥನ ಮಹಾಪ್ರಸಾದ ಮಾರಾಟವಾದ ಮೇಲೆ ಯಾವ ಭಾಗ ಉಳಿಯುತ್ತದೆಯೋ, ಅದು ಕೆಟ್ಟು ಹೋದ ಮೇಲೆ ಮಾರಾಟಗಾರರು ಅದನ್ನು ಪ್ರಾಸಾದದ ಹೊರಗೆ ಎಸೆಯುತ್ತಾರೆ. ಕೆಲವು ಹಸುಗಳು ಆ ಕೊಳೆತ ಪ್ರಸಾದವನ್ನು ತಿನ್ನುತ್ತವೆ. ಆದರೆ ಆ ಪ್ರಸಾದ ತುಂಬಾ ಕೆಟ್ಟಿದ್ದರೆ ಅದನ್ನು ಹಸುಗಳೂ ತಿನ್ನುವುದಿಲ್ಲ. ಅಂತಹ ಪ್ರಸಾದದ ತುಣುಕುಗಳು ಗೋಡೆಯ ಹತ್ತಿರವೇ ಉಳಿದು ಬಿಡುತ್ತವೆ. ಇದನ್ನು ಕಂಡ ರಘುನಾಥರು ಮಧ್ಯರಾತ್ರಿಯಲ್ಲಿ ಯಾರ ಗಮನಕ್ಕೂ ಬಾರದಂತೆ ಆ ಕೊಳೆತ ಮಹಾಪ್ರಸಾದವನ್ನು ಶೇಖರಿಸಿ, ತನ್ನ ಕುಟೀರಕ್ಕೆ ತಂದು, ನೀರಿನಿಂದ ಚೆನ್ನಾಗಿ ತೊಳೆಯುತ್ತಿದ್ದರು. ಮತ್ತೆ ಮತ್ತೆ ತೊಳೆದಾಗ ಅದರ ಕೊಳೆತ ಮೇಲ್ಭಾಗ ಹೊರಟು ಹೋದಮೇಲೆ ಉಳಿದ ಅದರ ಒಳಭಾಗವನ್ನು ಉಪ್ಪು ಸೇರಿಸಿ ತಿನ್ನುತ್ತಿದ್ದರು. ಈ ವಿಷಯ ಚೈತನ್ಯದೇವರ ಗಮನಕ್ಕೆ ಬಂತು. ಅಂತಹ ಘಟನೆಯನ್ನು

ತಾವೇ ಪ್ರತ್ಯಕ್ಷ ನೋಡಬೇಕೆಂಬ ಆಸೆಯಿಂದ ಚೈತನ್ಯಪ್ರಭುಗಳು ಒಂದು ಮಧ್ಯರಾತ್ರಿ ರಘುನಾಥನ ಕುಟೀರವನ್ನು ತಲುಪಿದರು.

ಅವರು ಕಂಡ ನೋಟ ಅವರನ್ನು ಅವಕ್ಕಾಗಿಸಿತು. ರಘುನಾಥರು ಮಹಾಪ್ರಸಾದವನ್ನು ತೊಳೆದು, ಉಪ್ಪು ಸೇರಿಸಿ ಅದನ್ನು ತಮ್ಮ ಇಷ್ಟ ದೇವತೆಗೆ ಅರ್ಪಿಸುತ್ತಿದ್ದರು. ಚೈತನ್ಯರ ದರ್ಶನವಾಗುತ್ತಲೇ ರಘು ನಾಥರಿಗೆ ತಮ್ಮ ಇಷ್ಟದೇವತೆ ಪ್ರತ್ಯಕ್ಷವಾದಂತೆಯೇ ಭಾಸವಾಯಿತು. ಚೈತನ್ಯದೇವರು ಎದುರಿನ ಪಾತ್ರೆಯಲ್ಲಿ ಮಹಾಪ್ರಸಾದವಿರುವು ದನ್ನು ಕಂಡು, ಹಠಾತ್ತಾಗಿ ಅದರಿಂದ ಒಂದು ಹಿಡಿ ತೆಗೆದು ತಿನ್ನತೊಡ ಗಿದರು. ಅದು ಸ್ವಾದಿಷ್ಟವೂ ತೃಪ್ತಿಕರವೂ ಆಗಿದ್ದುದನ್ನು ಕಂಡು ಅವರು ರಘುನಾಥರಿಗೆ ''ಈ ಅಮೃತವನ್ನು ನೀನೊಬ್ಬನೇ ಕದ್ದು ಮುಚ್ಚಿ ತಿನ್ನುತಿದ್ದೆಯಲ್ಲ!'' ಎಂದು ಹೇಳಿ ಇನ್ನೊಂದು ಹಿಡಿ ತೆಗೆದು ಕೊಳ್ಳಲು ಕೈಚಾಚಿದಾಗ ರಘುನಾಥರು ಅವರ ಕೈಹಿಡಿದು, ''ಇದು ತಮಗೆ ಉಪಯುಕ್ತವಲ್ಲ. ತಿಂದರೆ ನಿಮ್ಮ ಆರೋಗ್ಯ ಕೆಟ್ಟೀತು'' ಎಂದು ಚೈತನ್ಯದೇವರ ಕೈಯಿಂದ ಆ ಹಿಡಿ ಪ್ರಸಾದವನ್ನು ಎಳೆದು ಕೊಂಡರು. ಬಹಳ ದುಃಖದಿಂದ ಚೈತನ್ಯರು ''ಪ್ರತಿದಿನ ನಾನು ಎಷ್ಟೊಂದು ಪ್ರಸಾದವನ್ನು ತಿನ್ನುತ್ತೇನೆ! ಆದರೆ ಈ ಬಗೆಯ ಉತ್ತಮ ಗುಣ ಬೇರಾವ ಪ್ರಸಾದದಲ್ಲೂ ಕಾಣಸಿಕ್ಕಿಲ್ಲ'' ಎಂದು ಉದ್ಗರಿಸಿದರು.

* * *

ಕೊನೆಯದಾಗಿ ಚೈತನ್ಯದೇವರ ನಿರಭಿಮಾನ ಮತ್ತು ದೀನ-ಹೀನ ಭಾವನೆಯ ಪರಾಕಾಷ್ಠೆಯನ್ನು ತೋರಿಸಿಕೊಡುವ ಉದಾ ಹರಣೆಯೊಂದನ್ನು ನೋಡೋಣ. ಚೈತನ್ಯದೇವರು ಪ್ರತಿದಿನ ಬೆಳಿಗ್ಗೆ ಶ್ರೀಜಗನ್ನಾಥ ಮಂದಿರದ ಶಂಖಧ್ವನಿಯನ್ನು ಕೇಳಿ ಶಯ್ಯೆ ಯಿಂದ ಏಳುತ್ತಿದ್ದರು. ಬಳಿಕ ಅವರು ಪ್ರಾತಃಕೃತ್ಯ ಮತ್ತು ಸ್ನಾನ ವನ್ನು ಮುಗಿಸಿ, ಜಗನ್ನಾಥ ದರ್ಶನಕ್ಕಾಗಿ ಮಂದಿರಕ್ಕೆ ಹೋಗು ತ್ತಿದ್ದರು. ಸಾಮಾನ್ಯವಾಗಿ ಅವರು ಮಣಿಕೋಠಾದಲ್ಲಿ ಪ್ರವೇಶ ಮಾಡದೆ ನಾಟ್ಯಮಂದಿರದ ಪೂರ್ವದಲ್ಲಿರುವ ಗರುಡಸ್ತಂಭದ ಹತ್ತಿರ ನಿಂತು, ಪಶ್ಚಿಮದೆಡೆಗೆ ಮುಖಮಾಡಿ, ಜಗನ್ನಾಥನ ಮುಖ ದರ್ಶನವನ್ನು ಆಸ್ವಾದಿಸುತ್ತಿದ್ದರು. ಅಲ್ಲಿ ಕೆಲವೊಮ್ಮೆ ಅವರು ಅಂತರ್ದಶೆಯಲ್ಲಿ (ಜಡಸಮಾಧಿ) ಶಿಲಾಮೂರ್ತಿಯಂತೆ ನಿಶ್ಚಲ - ನಿಷ್ಪಂದರಾಗುತ್ತಿದ್ದರು.

ಒಂದು ದಿನ ಪ್ರಾತಃಕಾಲ ಚೈತನ್ಯದೇವರು ಅಂತರ್ದಶೆಯಲ್ಲಿ ಇದ್ದಾಗ ಮಂದಿರದಲ್ಲಿ ಬಹಳ ಜನಸಂದಣಿಯಿದ್ದು ಬಹಳಷ್ಟು ಮಂದಿ ಭಕ್ತರಿಗೆ ಜಗನ್ನಾಥನ ದರ್ಶನ ಸಾಧ್ಯವಾಗುತ್ತಿರಲಿಲ್ಲ. ಆ ದಿನ ಜಗನ್ನಾಥನ ದರ್ಶನಾಕಾಂಕ್ಷಿಯಾಗಿ ಅಲ್ಲಿಗೆ ಬಂದ ಗ್ರಾಮೀಣ ಮಹಿಳೆಯೊಬ್ಬಳು ಆ ನೂಕುನುಗ್ಗಲಿನಲ್ಲಿ ದರ್ಶನ ಪಡೆಯದೆ ಉದ್ವಿಗ್ನಳಾದಳು. ಅವಳು ಗರುಡಸ್ತಂಭದ ಬಳಿ ಸಾರಿ, ಸ್ತಂಭವನ್ನು ಹಿಡಿದು, ಹತ್ತಿರದಲ್ಲೇ ನಿಶ್ಚಲವಾಗಿ ನಿಂತಿರುವ ಚೈತನ್ಯದೇವರ ಭುಜಗಳ ಮೇಲೆ ಕಾಲಿಟ್ಟು, ತನ್ನ ತಲೆಯನ್ನು ಕೊಂಕಿಸಿ ಜಗನ್ನಾಥನ ದರ್ಶನ ಪಡೆದು ಹರ್ಷಿತಳಾದಳು. ಅವಳ ಹರ್ಷಧ್ವನಿಯನ್ನು ಕೇಳಿ ಸುತ್ತಮುತ್ತ ನಿಂತ ಜನರ ದೃಷ್ಟಿ ಆ ಕಡೆಗೆ ತಿರುಗಿತು. ಚೈತನ್ಯದೇವರ ಸೇವಕ ಗೋವಿಂದನೂ ಆ ಗಲಾಟೆಯನ್ನು ಕೇಳಿ ಅಚ್ಚರಿಯಿಂದ ಅವರ ಕಡೆಗೆ ನೋಡಿದಾಗ, ಅವನಿಗೆ ಅತ್ಯಂತ ಚಿಂತೆಯುಂಟಾ ಯಿತು. ಆ ಮಹಿಳೆಯನ್ನು ಚೈತನ್ಯದೇವರ ಭುಜದಿಂದ ಕೆಳಗಿಳಿ ಸಲು ಅವನು ಅತ್ತ ಧಾವಿಸಿದನು. ಇಷ್ಟರಲ್ಲೇ ಚೈತನ್ಯದೇವರಿಗೆ ಬಾಹ್ಯಪ್ರಜ್ಞೆ ಮರಳಿ, ಅವರು ನಡೆದ ವಿದ್ಯಮಾನವನ್ನು ಗ್ರಹಿಸಿ ಅವಳನ್ನು ಕೆಳಗಿಳಿಸದಂತೆ ಗೋವಿಂದನನ್ನು ತಡೆದರು.

ಸ್ವಲ್ಪ ಹೊತ್ತಾದ ಮೇಲೆ ಆ ಮಹಿಳೆಯೇ ಕೆಳಗಿಳಿದು, ತನ್ನ ಅಕೃ ತ್ಯದ ಅರಿವಾಗುತ್ತಲೇ ಪಶ್ಚಾತ್ತಾಪದಿಂದ ಚೈತನ್ಯರ ಚರಣಗಳ ಮೇಲೆ ಬಿದ್ದು ಕ್ಷಮೆ ಯಾಚಿಸತೊಡಗಿದಳು. ಆದರೆ ಚೈತನ್ಯದೇವರು ಅವಳ ವ್ಯಾಕುಲತೆ ಮತ್ತು ಭಕ್ತಿಯನ್ನು ಕೊಂಡಾಡುತ್ತ, ''ನಿನ್ನಲ್ಲಿರುವಂತಹ ವ್ಯಾಕುಲತೆಯನ್ನು ಪ್ರಭು ನನಗೂ ನೀಡಲಿಲ್ಲವಲ್ಲ!'' ಎಂದು ಹೇಳಿ ಅವಳಿಗೆ ಸಾಂತ್ವನ, ಅಭಯ ನೀಡುತ್ತಾ ಅವಳನ್ನು ಕಳುಹಿಸಿಕೊಟ್ಟು ತನ್ನ ಸಹಚರರಿಗೆ ಹೀಗೆ ಹೇಳಿದರು: ''ಅವಳ ತನು-ಮನ-ಪ್ರಾಣ ಎಲ್ಲವೂ ಜಗನ್ನಾಥನಲ್ಲಿಯೇ ಲೀನವಾಗಿತ್ತು. ಅವಳಿಗೆ ತಾನು ನನ್ನ ಭುಜದ ಮೇಲೆ ಕಾಲಿಟ್ಟಿದ್ದೇನೆಂಬ ಅರಿವೂ ಇರಲಿಲ್ಲ. ಆ ಭಾಗ್ಯ ಶಾಲಿಯ ಚರಣವಂದನೆ ಮಾಡುತ್ತೇನೆ ನಾನು. ಅವಳ ಕೃಪಾ ಪ್ರಸಾದದಿಂದ ನನಗೂ ಅಂತಹ ವ್ಯಾಕುಲತೆ ಉಂಟಾಗಲಿ!''

ಮೇಲಿನ ಘಟನೆಯಿಂದ ಚೈತನ್ಯದೇವರ ಮನಸ್ಸು ಎಷ್ಟು ಅಭಿ ಮಾನರಹಿತವಾಗಿತ್ತು ಎಂಬುದು ಅರಿವಾಗುತ್ತದೆ; ಅದರೊಂದಿಗೆ ಇನ್ನೊಂದು ತಥ್ಯ ನಿಚ್ಚಳವಾಗುತ್ತದೆ: ಭಗವದ್ಭಕ್ತಿಭಾವದಲ್ಲಿ ಚಿತ್ತ ತನ್ಮಯವಾದಾಗ ಸ್ತ್ರೀ ಅಥವಾ ಪುರುಷ ಅಭಿಮಾನ - ಎಂದರೆ, 'ನಾನು ಸ್ತ್ರೀ', 'ನಾನು ಪುರುಷ' ಎನ್ನುವ ದೇಹಾತ್ಮ ಭೋದೆಯೂ ಅಳಿಸಿಹೋಗುತ್ತದೆ.

ಚೈತನ್ಯ ಮಹಾಪ್ರಭು ಯಾವಾಗಲೂ ಅಂತರ್ದಶೆ, ಬಾಹ್ಯ ದಶೆ, ಅರ್ಧಬಾಹ್ಯದಶೆ ಈ ಮೂರರಲ್ಲಿ ಯಾವುದಾದರೊಂದು ಸ್ಥಿತಿಯಲ್ಲಿರುತ್ತಿದ್ದರು. ಆ ಸ್ಥಿತಿಗಳ ಅನುಭವದಿಂದ ಅವರ ನರ ಶರೀರ ತುಂಬಾ ಜರ್ಜರಿತವಾಗಿತ್ತು. ಅಂತೆಯೇ ತಮ್ಮ ೪೮ನೇ ವಯಸ್ಸಿನಲ್ಲಿ (೧೫೩೩ರಲ್ಲಿ) ಅವರು ತನ್ನ ಮಾನವಲೀಲೆಯನ್ನು ಮುಕ್ತಾಯಗೊಳಿಸಿ, ತಮ್ಮ ಪ್ರಿಯತಮ ವ್ರಜವಿಹಾರಿಯೊಂದಿಗೆ ಐಕ್ಯರಾದರು. ಹಲಕೆಲವರ ಅಭಿಪ್ರಾಯದಂತೆ ರಥಯಾತ್ರೆಯಲ್ಲಿ ಕೀರ್ತನೆಯ ಸಮಯದಲ್ಲಿ ಭಾವಾವೇಶದಿಂದ ಬಿದ್ದು, ಈಗಾಗಲೇ ಎಲುಬಿನ ಹಂದರವಾಗಿದ್ದ ಅವರ ದೇಹಕ್ಕೆ ಸಾಕಷ್ಟು ಪೆಟ್ಟಾಗಿತ್ತು. ಆದ್ದರಿಂದ ಅವರನ್ನು ಗುಂಡೀಚಾ ಭವನದಲ್ಲಿ ಇರಿಸಲಾಯಿತು. ಅಲ್ಲಿ ಅವರು ಅದೇ ಸ್ಥಿತಿಯಲ್ಲಿ ದೇಹತ್ಯಾಗ ಮಾಡಿದರು. ಗುಂಡೀಚಾ ಭವನದಲ್ಲಿಯೇ ಅವರ ಪೂತ ಶರೀರವನ್ನು ಲೀನ ಮಾಡಲಾಯಿತು. ಈ ಕುರಿತು ಭಿನ್ನವಾದ ಇತರ ಐತಿಹ್ಯಗಳೂ ನಮಗೆ ದೊರಕುತ್ತವೆ. ಗದಾಧರರ ಕುಟೀರದ ಪಕ್ಕದಲ್ಲೇ ಇರುವ ಚೈತನ್ಯದೇವರ ಸಮಾಧಿಸ್ಥಾನವನ್ನು ನೋಡಿದಾಗ 'ಸಂನ್ಯಾಸ ಶಿರೋಮಣಿ'ಯ ಲೀಲೆಯನ್ನು ಯಾರು ತಾನೆ 'ಇದಮಿತ್ಥಂ' ಎಂದು ಅರಿಯಬಲ್ಲರು? - ಎಂದೆನಿಸದಿರಲಾರದು. ❖




# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

ಭಾಗ-೫



ಒಂಬತ್ತು ಗಂಟೆಯಾಗಿದೆ. ಒಬ್ಬ ಕೆಲಸದವನು ಆಗ ತಾನೆ ಮಠಕ್ಕೆ ಹಿಂದಿರುಗಿದ್ದಾನೆ. ಬಂದ ಕೆಲವೇ ದಿನಗಳಲ್ಲಿ ಮರಳಿ ಹೋಗಲು ತಯಾರಾಗುತ್ತಿದ್ದ. ಅವರ ಬದಲಾಗಿ ಬೇರೆ ಕೆಲಸದವನು ಬಂದ ಕೂಡಲೇ ಅವನು ಹೊರಟುಹೋದ. ಬಾಬಾ ಅನೇಕ ಬಾರಿ ಅವನನ್ನು ಶ್ರೀ ಶ್ರೀ ಠಾಕೂರರ ಉತ್ಸವದವರೆಗೆ ಇರಬೇಕೆಂದು ಕೇಳಿ ಕೊಂಡರು. 'ಏನೂ ಮಾಡುವುದು ಬೇಡ, ಇಲ್ಲಿ ಇದ್ದರೆ ಸಾಕು. ಇನ್ನು ೮-೧೦ ದಿನಗಳಿವೆ ಅಷ್ಟೆ.' ಅವನು ಪ್ರಣಾಮ ಮಾಡಿ ಹೊರಟುಹೋದ ಮೇಲೆ ಬಾಬಾ ಬಹಳ ನೊಂದುಕೊಂಡು ಹಾಸಿಗೆ ಯಲ್ಲಿ ಮಲಗಲು ಹೋದರು. ತಮಗೆ ಗಾಳಿ ಬೀಸಲು ಒಬ್ಬರಿಗೆ ಹೇಳಿದರು. ಅತ್ಯಂತ ವ್ಯಥೆಯಿಂದ ಅವರು ಹೇಳಿದರು, ''ನನ್ನ ಮನಸ್ಸಿಗೆ ಬಹಳ ನೋವನ್ನುಂಟುಮಾಡಿ ಹೋದ.. ನನ್ನ ಹೃದಯಕ್ಕೆ ದೊಡ್ಡ ಏಟಾಗಿದೆ. ಉತ್ಸವದವರೆಗೆ ಠಾಕೂರರ ಹೆಸರಿನಲ್ಲಿ ಇಲ್ಲಿ ಇರಲು ಹೇಳಿದೆ. ಆದರೂ ಅವನು ಕೇಳಲಿಲ್ಲ. ಪಟ್ಟಣವನ್ನು ಬಿಟ್ಟು ಹಳ್ಳಿಕೇರಿಯಲ್ಲಿರುವುದು ಅವನಿಗೆ ಕಷ್ಟವಾಗುತ್ತಿರಬೇಕು.''

ಸೇವಕರೊಬ್ಬರಿಗೆ ಬಾಬಾ ಹೇಳುತ್ತಿದ್ದಾರೆ: ''ಏನೂ ಸಾಧಿಸು ತ್ತಿಲ್ಲವೆಂದು ನೀನಂದುಕೊಂಡಿರುವೆ. ನಿಜ ಹೇಳುತ್ತಿದ್ದೇನೆ, ನೀನೇನು ಮಾಡುತ್ತಿದ್ದೀಯೋ ಅದರಿಂದಲೇ ನನಗೆ ಬಹಳ ಸೇವೆಯಾಗುತ್ತಿದೆ – ನಿಜವಾದ ಸೇವೆ. ನಿನಗೂ ಬಹಳ ಪ್ರಯೋಜನವಾಗುತ್ತಿದೆ. ಈ ಕೆಲಸವನ್ನು ನೀನು ಮಾಡದಿದ್ದರೆ, ನನಗೆ ಇದರ ಚಿಂತೆಯಾಗುತ್ತಿತ್ತು. ಎಲ್ಲರೂ ತಮ್ಮ ಕೆಲಸಗಳಲ್ಲಿ ನಿರತರಾಗಿದ್ದಾರೆ, ಯಾರೂ ನನ್ನ ಕಡೆ ನೋಡುತ್ತಿಲ್ಲ, ಶರೀರದ ಸೇವೆ ಮಾತ್ರವೇ ಸೇವೆಯೇನು? ಮನಸ್ಸಿನ ಸೇವೆಯೂ ಸೇವೆಯೇ – ಇನ್ನೂ ಹೆಚ್ಚಿನದು.''

ವೈಶಾಖ ಮಾಸದ ಸಂಕ್ರಾಂತಿಯ ದಿನ. ಇಂದು ಸೇವಕರೊಬ್ಬರ ಸೋದರನಿಗೆ ಮಂತ್ರದೀಕ್ಷೆಯಾಗಿದೆ. ಸಾಯಂಕಾಲ ಬಾಬಾ ಸೋದರರಿಬ್ಬರನ್ನೂ ಕರೆದು ವಾತದ ಔಷಧಿಹಚ್ಚಿ ಮಾಲೀಷು ಮಾಡಲು ಹೇಳಿದರು. ಇಬ್ಬರೂ ಮಹದಾನಂದದಿಂದ ಸೇವೆ ಮಾಡುತ್ತಿದ್ದರೆ, ಬಾಬಾ ಮೌನವಾಗಿ ಕುರ್ಚಿಯಲ್ಲಿ ಆರಾಮವಾಗಿ ಕುಳಿತಿದ್ದಾರೆ. ಕೆಲಕ್ಷಣಗಳ ತರುವಾಯ ಹೇಳುತ್ತಿದ್ದಾರೆ, ''ಇಷ್ಟು ದಿನಗಳು ಬರಿಯ blood brothers (ರಕ್ತ ಸಂಬಂಧದ ಸೋದರರು) ಆಗಿದ್ದಿರಿ. ಇಂದಿನಿಂದ spiritual brothers (ಆಧ್ಯಾತ್ಮಿಕ ಸೋದರರು) ಇನ್ನು ಒಬ್ಬರನೊಬ್ಬರು ಬಿಡುವಂತಿಲ್ಲ, ನನಗೂ ಅತಿಶಯ ಆನಂದವಾಗುತ್ತಿದೆ.''

ಸಂಜೆ ಸ್ವಾಮಿ ಅಖಂಡಾನಂದಜಿ ಕ್ಯಾಂಪ್‌ಕಾಟ್‌ನಲ್ಲಿ ಕುಳಿತಿ ದ್ದಾರೆ. ಮಾಲ್ಡಾದ ಭಕ್ತನೊಬ್ಬ ಭಾವ ಪೂರ್ಣವಾಗಿ ಹಾಡುತ್ತಿದ್ದಾನೆ:

**ಸಹಜ್ ಮಾನುಷ್ ಹೊಯ್ ಜೆ ಜನಾ,**
**ಒ ಮನೇರ್ ಮಾನುಷ್ ಹೊಯ್ ಜೆ ಜನಾ**
**ತಾಯ್ ಚೋಖೇ ದೇಖ್‌ಲೇಯಿ ಜಾಯ್ ಗೊ ಚೇನಾ।**
**ಶೇ ಉಜಾನ್ ಪಥೇ ಕರೇ ಆನಾಗೊನಾ।**
**ತಾರ್ ಕಾಮ್‌ನದೀತೇ ಚರ್ ಪಡೇಛೆ**
**ಆರ್ ಪ್ರೇಮ್‌ನದೀತೆ ಜಲ್ ಧರೇ ನಾ।**

'ಸರಳ ಹೃದಯದ, ಶುದ್ಧ ಮನಸ್ಸಿನ ವ್ಯಕ್ತಿಯನ್ನು ಒಂದೇ ನೋಟದಿಂದ ಗುರುತಿಸಬಹುದು. ಅಂಥವನು ನದಿಯನ್ನು ಸುಲಭವಾಗಿ, ಪ್ರವೇಶಿಸಿ ಹೊರಬರಬಲ್ಲನು. ಅವನ ಕಾಮನೆಗಳ ನದಿ ಬತ್ತಿ ಹೋಗಿದೆ, ಆದರೆ ಅವನ ಪ್ರೇಮನದಿಯಲ್ಲಿ ನೀರು ತುಂಬಿ ಹರಿಯುತ್ತಿದೆ.'

ಹಾಡು ಮುಗಿದಾಗ ಬಾಬಾ ಹೇಳಿದರು, ''ಸೊಗಸಾಗಿ ಹಾಡಲು ಬಾರದವರನ್ನು ಸ್ವಾಮೀಜಿ ಸಂಪೂರ್ಣ ಮನುಷ್ಯನೆಂದು ಪರಿಗಣಿಸುತ್ತಿರಲಿಲ್ಲ. ಹಾಡು ಮನುಷ್ಯನ ಒಂದು ವಿಶೇಷ ಗುಣ. ಅದು ಹೃದಯದಿಂದ ಹೊಮ್ಮುತ್ತದಲ್ಲವೆ?''

ಬಾಬಾ ಹಾಲ್‌ನಲ್ಲಿ, ಸಾಯಂಕಾಲದ ಮಬ್ಬುಗತ್ತಲಲ್ಲಿ ಕುಳಿತಿ ದ್ದಾರೆ. ಕೋಣೆಯಲ್ಲಿ ಮೋಂಬತ್ತಿ ಉರಿಯುತ್ತಿದೆ. ಕುರ್ಚಿಯ ಸಮೀಪ, ನೆಲದ ಮೇಲೆ ಒಬ್ಬಿಬ್ಬರು ಭಕ್ತರು ಕುಳಿತಿದ್ದಾರೆ. ಬಾಬಾ ಹೇಳುತ್ತಿದ್ದಾರೆ – ''ಇನ್ನೆಷ್ಟು ಬಾರಿ ಜಪಮಾಲೆ ತಿರುಗಿಸುತ್ತೀರಿ? ವ್ಯಾಕುಲತೆಯಿಂದ ಪ್ರಾರ್ಥಿಸಿ. ಪ್ರಾರ್ಥಿಸುತ್ತಾ ಇದ್ದರೆ ಎಲ್ಲವೂ ಸ್ಥಿರವಾಗುತ್ತದೆ. ಕೈಯಲ್ಲಿದ್ದ ಜಪಮಾಲೆಯು ಕೈಯಲ್ಲೇ ಇದ್ದುಬಿಡು ತ್ತದೆ, ತಿರುಗುವುದಿಲ್ಲ, ಮೈಮೇಲಿನ ವಸ್ತ್ರದ ಪರಿವೆಯೇ ಇರುವು ದಿಲ್ಲ , ಜಾರಿ ಹೋಗುತ್ತದೆ. ನಾಮೋಚ್ಚಾರಣೆ ಮಾಡುತ್ತಲೇ ಇಷ್ಟ ದೇವತೆಯ ದರ್ಶನವಾಗುತ್ತದೆ. ಆಗ ಅದೆಷ್ಟು ನಗು, ಅದೆಷ್ಟು

ಅಳು, ಎಷ್ಟೊಂದು ಮಾತುಗಳು – 'ಇಷ್ಟು ದಿನಗಳೇಕೆ ದರ್ಶನ ಕೊಡಲಿಲ್ಲ?' ಅಂತೆಲ್ಲ. ವ್ಯಾಕುಲತೆಯನ್ನು ಹೊಂದಿ. ಇಷ್ಟು ಜಪ ಮಾಡಬೇಕು, ಅಷ್ಟು ಜಪ ಮಾಡಬೇಕು, ಅಂತೇನೂ ಇಲ್ಲ, ವ್ಯಾಕುಲತೆಯಿಂದ, ಕಾತರತೆಯಿಂದ, ಕಂಬನಿಗರೆಯುತ್ತ ಪ್ರಾರ್ಥಿಸಬೇಕು. ಹೀಗೆ ವಿನಂತಿಸಿಕೊಳ್ಳಬೇಕು 'ದರ್ಶನ ನೀಡು, ದರ್ಶನ ನೀಡು. ಎಷ್ಟು ಜನರಿಗೆ ದರ್ಶನ ನೀಡಿದ್ದೀಯೆ, ನನಗೇಕೆ ನೀಡುತ್ತಿಲ್ಲ? ನೀನೇ ಹೇಳಿರುವೆ – ನಿನಗಾಗಿ ಯಾರು ಕಣ್ಣೀರು ಸುರಿಸುತ್ತಾರೋ ಅವನಿಗೇ ದರ್ಶನ ನೀಡುವೆ ಅಂತ, ಮತ್ತೇಕೆ ನನಗೆ ನೀಡುತ್ತಿಲ್ಲ? ದರ್ಶನ ನೀಡು' ಎಂದು ವ್ಯಾಕುಲಚಿತ್ತದಿಂದ ಅಳಬೇಕು. ಠಾಕೂರರು ನಮ್ಮನ್ನು ಕೇಳುತ್ತಿದ್ದರು – 'ಏನಪ್ಪ, (ಅಳುತ್ತ, ಅಳುತ್ತ) ಪ್ರಾರ್ಥಿಸಿದ್ದೆಯಾ?' ಅಂತ. ನಾವೇನಾದರೂ 'ಹೌದು' ಎಂದರೆ ತುಂಬ ಸಂತೋಷಗೊಳ್ಳುತ್ತಿದ್ದರು. ಮತ್ತೆ ವಿಚಾರಿಸುತ್ತಿದ್ದರು, 'ಕಣ್ಣಿನ ಯಾವ ತುದಿಯಿಂದ ನೀರು ಬಂತು?' ಮೂಗಿನ ನೇರದ ತುದಿಯಿಂದ ಹರಿಯುವುದು ಅನುತಾಪಾಶ್ರು. ಕಿವಿಯ ಕಡೆಯ ತುದಿಯಿಂದ ಪ್ರೇಮಾಶ್ರು.

''ಠಾಕೂರರ ಬಳಿಗೆ ಬಂದವರಿಗೆಲ್ಲ ಅಷ್ಟಸಾತ್ವಿಕ ವಿಕಾರ – ಸ್ವೇದ, ಕಂಪನ, ಪುಲಕ, ಅಶ್ರು, ನಗೆ, ಅಳು, ನೃತ್ಯ, ಗೀತ, ಯಾವುದಾದರೊಂದು ಉಂಟಾಗುತ್ತಿತ್ತು. ಭಾವದಿಂದ ನಕ್ಕು, ಅತ್ತು, ನರ್ತಿಸಿ ಹಾಡುವುದು. ಇದು ಸ್ವಾಮೀಜಿಗೂ ಆಗುತ್ತಿತ್ತು, ಠಾಕೂರರಿಗಂತೂ ಆಗುತ್ತಲೇ ಇತ್ತು. ಕಾರ್ಯತತ್ಪರನಾಗು. ಅಳುತ್ತ ಅಳುತ್ತ ಪ್ರಾರ್ಥಿಸು, 'ನನಗೇಕೆ ಏನೂ ಆಗುತ್ತಿಲ್ಲ? ನನಗೇಕೆ ದರ್ಶನವಾಗುತ್ತಿಲ್ಲ? ನಿನ್ನನ್ನು ನೋಡಲು ನನಗೇಕೆ ವ್ಯಾಕುಲತೆ ಉಂಟಾಗುತ್ತಿಲ್ಲ?' ಎಂದು.''

ಮತ್ತೊಂದು ದಿನ ಸಂಜೆ, ಬಾಬಾ ಕೋಣೆಯಲ್ಲಿ ಮಂಚದ ಮೇಲೆ ಮಲಗಿರುವುದನ್ನು ನೋಡಿ 'ಸ್ಮೃತಿಕಥೆ'ಯನ್ನು ಬರೆಯುವ ಸೇವಕ ಬಂದು ಹೊರಟುಹೋದ; ಸ್ವಲ್ಪ ಹೊತ್ತು ಕಳೆದ ನಂತರ ಮತ್ತೆ ಬಂದ. ಬಾಬಾ ಹೇಳಿದರು: ''ನನ್ನನ್ನೇಕೆ ಕರೆಯಲಿಲ್ಲ? ನಾನು ನಿದ್ರಿಸುತ್ತಿದ್ದೇನೆ ಎಂದುಕೊಂಡೆ ನೀನು. ನಾನು ನಿದ್ರಿಸುವುದೆ? ಇವರು (ಹುಡುಗರು) ಶಿವನ ಹೆಸರನ್ನು ಸ್ತುತಿಸುತ್ತಿದ್ದರು – ಶಿವ, ಶಿವ! ಅನಂತ. ಅನಂತದ ಅಂಶವೂ ಅನಂತ, ಈ ಆಕಾಶ, ನಕ್ಷತ್ರಗಳು, ವಿಶ್ವ, ಜಗತ್ತು – ಸಮಾಧಿಯಲ್ಲಿ ಎಲ್ಲವೂ ಶೂನ್ಯ. '**ಕುತ್ರ ಲೀನಮಿದಂ ವಿಶ್ವಂ, ಕ್ವ ಗತಂ ಕೇನ ವಾ ನೀತಮ್?**' ಗುರುವಿನ ಉಪದೇಶವನ್ನು ಕೇಳಿ ಗಂಭೀರ ಧ್ಯಾನ ಹಾಗೂ ಉಪಲಬ್ಧಿಯನ್ನು ಪಡೆದ ಶಿಷ್ಯನು ಹೇಳುತ್ತಾನೆ, ವಿಶ್ವ ಜಗತ್ತು ಎಲ್ಲಿ ಮಾಯವಾಯಿತು? ಈಗ ತಾನೆ ಇತ್ತಲ್ಲ, ಯಾರು ತೆಗೆದುಕೊಂಡು ಹೋದರು?''

ರಾತ್ರಿ ಸುಮಾರು ಎಂಟು ಗಂಟೆ. ಬಾಬಾ ಕೋಣೆಯಲ್ಲಿ ಮಲಗಿದ್ದಾರೆ. ಸೇವಕ ಭಕ್ತ ಬ್ರಹ್ಮಚಾರಿಗಳು ಬಾಬಾಗೆ ಪ್ರಣಾಮ ಸಲ್ಲಿಸಲು ಬರುತ್ತಿದ್ದಾರೆ. ಬಾಬಾ ಎದ್ದು ಕುಳಿತು ಭಾವುಕರಾಗಿ ಹೇಳತೊಡಗಿದರು, ''Hand, head and heart'' ಮೂರನ್ನೂ culture ಮಾಡಬೇಕು, ಕೈಗಳ ಕೆಲಸವೆಂದರೆ ದೈಹಿಕ ಕೆಲಸ, ಕಾರ್ಯಗಳು. ತಲೆಯ ಕೆಲಸ ವಿದ್ಯಾಬುದ್ಧಿಯ ಅನುಶೀಲನ. ಹೃದಯದ ಕಾರ್ಯ ಸೇವೆ ಹಾಗೂ ಪ್ರೀತಿ. ಸ್ವಾಮೀಜಿ ನನಗೆ ಬರೆದಿದ್ದರು ''It is the heart that conquers, not the brain''(ಹೃದಯಕ್ಕೇ ಜಯ, ಮೆದುಳಿಗಲ್ಲ) ಪ್ರತಿಯೊಂದು ಪ್ರಾಣಿಯೂ ಹೃದಯದ ಭಾಷೆಯನ್ನರಿಯಬಲ್ಲುದು. ಸ್ವಾಮೀಜಿಯಲ್ಲಿ ಮೂರೂ ವಿಕಾಸಗೊಂಡಿದ್ದವು. ನಾವು ಮೊದಲಿನಿಂದಲೂ ಪ್ರಯತ್ನಿಸಬೇಕು. ನಾವು ಸ್ವಾಮೀಜಿಯಂತೆ spiritual (ಆಧ್ಯಾತ್ಮಿಕ)ರಲ್ಲದಿರಬಹುದು. ಅವರಲ್ಲಿರುವ heart ಅಥವಾ intellect ನಮಗಿಲ್ಲದಿರಬಹುದು. ಆದರೆ ಕೈಯಿಂದ ಮಾಡುವ ಕಾರ್ಯದಲ್ಲಿ ನಾವು ಅವರನ್ನು ಅನುಸರಿಸಬಹುದು. ಮಠದಲ್ಲಿ ಅವರು ದೊಡ್ಡ ದೊಡ್ಡ ಹಂಡೆಗಳನ್ನು ತೊಳೆಯುತ್ತಿದ್ದರು. ಅದರಲ್ಲಿ ಒಂದಿಂಚು ಕೊಳೆ ಇರುತ್ತಿತ್ತು. ನಾವು ಒಂದು ತಟ್ಟೆಯನ್ನೂ ಸ್ವಚ್ಛಗೊಳಿಸಲಾರೆವೆ? ಅವರು ಮಠದ ಪಾಯಿಖಾನೆಯನ್ನು ಶುಚಿಗೊಳಿಸುತ್ತಿದ್ದರು, ಗೊತ್ತೆ? ಒಂದು ದಿನ ಬಂದು ನೋಡುತ್ತಾರೆ – ಅಲ್ಲಿ ತುಂಬಾ ದುರ್ಗಂಧ. ಸ್ವಾಮೀಜಿ ರುಮಾಲನ್ನು ಮುಖಕ್ಕೆ ಕಟ್ಟಿಕೊಂಡು, ಎರಡು ಕೈಗಳಲ್ಲೂ ಎರಡು ಬಕೇಟನ್ನು ತೆಗೆದುಕೊಂಡು ಹೊರಟರು. ಆಗ ಎಲ್ಲರೂ ಅದನ್ನು ನೋಡಿ ಓಡಿಬರುತ್ತ, ''ಸ್ವಾಮೀಜಿ, ನೀವು!'' ಎಂದರು. ಸ್ವಾಮೀಜಿ ನಗುತ್ತ ''ಇಷ್ಟು ಹೊತ್ತಾದ ಮೇಲೆ 'ಸ್ವಾಮೀಜಿ, ನೀವು' ಎನ್ನುತ್ತೀರಲ್ಲ'' ಎಂದರು.

ಬೆಳಿಗ್ಗೆ ಪತ್ರ ಬರೆಯುವ ಸೇವಕ, ಪತ್ರವೊಂದಕ್ಕೆ ಉತ್ತರಿಸುವಾಗ ಸಾಮಾನ್ಯವಾಗಿ ಬರೆಯುವಂತೆ ಬರೆದಿದ್ದ – 'ನನಗೆ ವಯಸ್ಸಾಗಿದೆ, ತಕ್ಷಣ ಉತ್ತರ ಬರೆಯಲಾಗುವುದಿಲ್ಲ ಇತ್ಯಾದಿ.' ಇದನ್ನು ಕೇಳಿ ಬಾಬಾ ನೆಟ್ಟಗೆ ಕುಳಿತು, ಕಠಿಣವಾಗಿ ಹೇಳಿದರು – ''ನನಗೆ ವಯಸ್ಸಾಗಿದೆಯೆ? ಸಾಧ್ಯವೇ ಇಲ್ಲ; ಅದನ್ನು ಹೊಡೆದು ಹಾಕು. ನಾನು still young-young in spirit (ನಾನಿನ್ನೂ ಯುವಕ–ಭಾವದಲ್ಲಿ ಯುವಕ) ಕೈ ಮುಷ್ಟಿ ಹಿಡಿದು ಮತ್ತೆ ಹೇಳಿದರು, I am youngest than all of you combined (ನಿಮ್ಮೆಲ್ಲರಿಗಿಂತಲೂ ನಾನು ಯುವಕ) ನನ್ನ ಶರೀರವೇನೂ ಆ ರೀತಿ ಅಲ್ಲಾಡುವುದಿಲ್ಲ. ಆದರೆ ಜೀವನದಲ್ಲಿ ಉತ್ಸಾಹ ತುಂಬಿದೆ– ಸರ್ವದಾ ಏನಾದರೂ ಮಾಡಬಯಸುತ್ತದೆ. ನೋಡುತ್ತಿದ್ದೀಯಲ್ಲ – ಆಯಾಸದಿಂದ ಮಲಗಿದ್ದೆ. ಆದರೂ ಕೆಲಸಮಾಡಲು ಮನಸ್ಸಾಗುತ್ತಿದೆ. ಇನ್ನೇನು ಕೆಲಸ ಮಾಡುವುದಂತೆ? ಪತ್ರ ಬರೆಸೋಣವೆಂದುಕೊಂಡೆ, ಆದರೆ ನೀನು, 'ನನಗೆ ವಯಸ್ಸಾಗಿದೆ' ಎಂದೆಲ್ಲ ಬರೆದುಬಿಟ್ಟೆಯಲ್ಲ!''

ಮನಿ ಆರ್ಡರ್ ಬಂದಿತ್ತು – ಸೇವಕ ಕೂಪನನ್ನು ಬಾಬಾಗೆ ಕೊಟ್ಟ; ಅದನ್ನು ನೋಡಿ ಬಾಬಾ ಕೇಳಿದರು; ''ಇದರ ವಿಳಾಸವೆಲ್ಲಿ? ಗೊತ್ತಿಲ್ಲವೆ? ಏಕೆ ಗೊತ್ತಿಲ್ಲ? ತಿಳಿದುಕೊಳ್ಳಬಯಸಲಿಲ್ಲ ಅಥವಾ ಪ್ರಯತ್ನಿಸಲಿಲ್ಲ. form ಅನ್ನು ನೋಡಿ ಬರೆದುಕೊಳ್ಳಬಹುದಾಗಿತ್ತು, ಅಥವಾ ಕೇಳಿದ್ದರೆ ತಿಳಿಯುತ್ತಿತ್ತು. ನೀನು ಈ ಸಾಮಾನ್ಯ ವಿಷಯದಲ್ಲೇ ಹೀಗೆ. ಮತ್ತೆ ಬ್ರಹ್ಮಜ್ಞಾನ? ಅದೇನು ಸುಲಭದ ಮಾತೆ? ತಿಳಿದುಕೊಳ್ಳಬೇಕೆಂಬ ಇಚ್ಛೆ ಎಷ್ಟು ತೀವ್ರವಾಗಿರಬೇಕು, ಎಷ್ಟು ದಿನಗಳ ಪ್ರಚಂಡ ಸಾಧನೆ, ಪ್ರಯತ್ನಗಳು ಅಗತ್ಯ! ಆಗತಾನೇ ಅದು ಲಭ್ಯವಾಗುವುದು! ಅರ್ಥವಾಯಿತೆ? ಮೊದಲು ಇಚ್ಛೆ, ಅನಂತರ ಪ್ರಯತ್ನ.''

ಒಂದು ದಿನ ಸಂಜೆ ಹತ್ತಿರದಲ್ಲಿ ಸೇವಕರಿರಲಿಲ್ಲ. ಬಾಬಾ ಕೈಗೆ ನೀರು ಹಾಕಲು ಕರೆಯುತ್ತಿದ್ದಾರೆ. ಭಕ್ತ ಒಂದು ಬಿಂದಿಗೆಯಿಂದ ಅವರ ಕೈಗೆ ಹಾಕಲು ಹೋದ. ನೀರು ಕೊಟ್ಟಾದ ಮೇಲೆ ಬಾಬಾ ಹೇಳತೊಡಗಿದರು(ಬಿಂದಿಗೆ ಯನ್ನು ಹಿಡಿದು ತೋರಿಸುತ್ತ) :

''ಬಿಂದಿಗೆಯನ್ನು ಈ ರೀತಿ ಹಿಡಿದು ನೀರು ಹಾಕಬೇಕು. ಹೊರಗಡೆ ಹಿಡಿಯಬೇಕು, ಬಿಂದಿಗೆಯ ಒಳಗೆ ಕೈಯನ್ನು ಅದ್ದ ಬಾರದು. ಚಿಕ್ಕ ಪುಟ್ಟ ಕೆಲಸಗಳನ್ನು ತಪ್ಪಿಲ್ಲದೆ ಮಾಡಬೇಕು. ಬಾಹ್ಯ ಕೆಲಸ ಹೇಗಾದರೂ ಮಾಡಿದರಾಯಿತು, ಎಂದಲ್ಲ. ಎಲ್ಲ ಕೆಲಸ ಗಳನ್ನೂ ಸಾವಧಾನವಾಗಿ ಮಾಡಬೇಕು. ಯಾವಾಗ, ಯಾವ ಕೆಲಸವೇ ಆಗಲಿ, ಮನಸ್ಸನ್ನೆಲ್ಲ ಅದರಲ್ಲಿಡಬೇಕು, ಹಾಗೂ ಅದೇ ಸಾಧನೆಯೆಂದು ತಿಳಿಯಬೇಕು – ಅದೇ ಆತನನ್ನು ಪಡೆಯುವ ಬಗೆ. ಢಾಕಾದ ಡಾ.ಗಾಂಗೂಲಿ ತೋಟದ ಮಣ್ಣನ್ನು ಅಗೆಯುತ್ತಾರೆ, ಹೂಗಿಡಗಳಿಗೆ ನೀರು ಹಾಕುತ್ತಾರೆ. 'ಇದು ಠಾಕೂರರ ತೋಟ, ಅದಕ್ಕೆ ನೀರು ಹಾಕುತ್ತಿದ್ದೇನೆ, ಗಿಡ ಬೆಳೆಯುತ್ತದೆ, ಹೂವಾಗುತ್ತದೆ, ಆ ಹೂವಿನಿಂದ ಠಾಕೂರರ ಪೂಜೆ ಮಾಡಬಹುದು' ಎಂಬ ಭಾವ ದಿಂದ ಅವರು ಮಾಡುತ್ತಿದ್ದಾರೆ. ಅವರಿಗೆ ಸದಾ ಇದೇ ಚಿಂತನೆ. ಜಪಧ್ಯಾನವೆಂದರೆ ಇದೇ; ಇದೇ ಸಾಧನೆ – ಭಜನೆ.

ಒಂದು ದಿನ ಬಾಬಾ ಒಬ್ಬರೇ ಹಾಡುತ್ತಿದ್ದಾರೆ :

**ಹಾಸ್‌ಮುಖ್ ತೇರಾ ಕೊರ್‌ಲೊ ಕೀ ಗುಣ್ ।**
**ಅಂದರ್ ಜ್ವಾಲ್ ರಹಾ ಇಷ್‌ಕ್ ಆಗುನ್ ॥**

(ನಿನ್ನ ನಗೆಮೊಗವು ನನಗೇನು ಮಾಡಿಬಿಟ್ಟಿದೆ! ನನ್ನೊಳಗೆ ಪ್ರೇಮಜ್ವಾಲೆಯು ಉರಿಯುತ್ತಿದೆ.) ಭಕ್ತರು, ಸೇವಕರು ಬಳಿಸಾರಿ ದಾಗ ಹೇಳಿದರು – ಇಷ್ಕ್ ಎಂದರೆ love (ಪ್ರೇಮ). ಈ ಹಾಡನ್ನು ಪ್ರೇಮಿಯೊಬ್ಬ ತನ್ನ ಪ್ರಿಯತಮೆಗೆ ಹಾಡಿದ್ದ – ಪಶ್ಚಿಮದ ಒಂದು ಶಹರಿನಲ್ಲಿ. ಅದು ನನ್ನ ಕಿವಿಗೆ ಬಿದ್ದಾಗ, ನನ್ನ ಮನಸ್ಸಿಗೆ ಅದು ಬೇರೆ ರೀತಿ ಅರ್ಥವಾಯಿತು. ನಾನಂದುಕೊಂಡೆ – ನಿಜವಾಗಿಯೂ, ನಗುಮುಖ ಇನ್ನಾರಿಗಿದೆ? ಠಾಕೂರರಿಗೆ ಮಾತ್ರ ನಗುಮುಖ ವಿರುವುದನ್ನು ನಾನು ನೋಡಿದ್ದೇನೆ.

ಸಂಜೆ ವರಾಂಡದಲ್ಲಿ ಭಕ್ತರ ತಂಡವೊಂದು ಕಲೆತಿದೆ. ಒಬ್ಬರು ಪ್ರಶ್ನಿಸಿದರು: ''ನೀವು ಟಿಬೆಟ್ಟಿಗೆ ಹೋದದ್ದೇಕೆ? ಅಲ್ಲಿನ ವಿಷಯಗಳೇನೇನು?'' ಇತ್ಯಾದಿ. ಬಾಬಾ ಹೇಳಿದರು, ''ಟಿಬೆಟ್ಟಿಗೆ ಹೋದದ್ದೇಕೆ? ಠಾಕೂರರು ಹೊರಟುಹೋದ ಮೇಲೆ ಎಲ್ಲೂ, ಏನೂ ಇಷ್ಟವಾಗು ತ್ತಿರಲಿಲ್ಲ. ಎಲ್ಲಿಗೆ ಹೋದರೆ ಅವರು ಮತ್ತೆ ಸಿಗುವರೆಂದು ಸದಾ ಭಾವಿಸುತ್ತಿದ್ದೆ. ಹಿಮಾಲಯಕ್ಕೆ ಹೋದರೆ ಅವರು ನಿಶ್ಚಯವಾಗಿ ಸಿಗುತ್ತಾರೆ, ಹಿಮಾಲಯ ಭಗವಂತನ ಸ್ಥಾನ ಎಂದೆನಿಸುತ್ತಿತ್ತು. ಕೈಲಾಸ, ಮಾನಸ ಸರೋವರ, ಕೇದಾರ – ಬದರಿ ಎಂದು ಬಾಲ್ಯ ದಿಂದಲೂ ಕೇಳಿ, ದೊಡ್ಡವನಾದ ಮೇಲೆ ಅಲ್ಲಿಗೆ ಹೋಗಿ ಬಿಡೋಣ ಅನ್ನಿಸುತ್ತಿತ್ತು. ಟಿಬೆಟ್ಟಿನಲ್ಲಿ ಈಗಲೂ ದೊಡ್ಡ ದೊಡ್ಡ ಬೌದ್ಧ ಮಠಗ ಳಿವೆಯೆಂದು ಕೇಳಿದ್ದೆ. ನೋಡಲು ಬಹಳ ಆಸೆಯಾಗುತ್ತಿತ್ತು. ಹಿಮಾಲಯ – ಒಂದಾದ ಮೇಲೊಂದು ಪರ್ವತಗಳು, ಚಿರ ತುಷಾರಾ ವೃತ. ಇಡೀ ವರ್ಷದಲ್ಲಿ ಯಾವತ್ತೂ ಅಲ್ಲಿನ ಹಿಮ ಕರಗುವುದಿಲ್ಲ– ಕಣ್ಣು ಕೋರೈಸುವ ಶ್ವೇತವರ್ಣ, ಸ್ತಬ್ಧ. ಹಿಮದ ಮೇಲೆಯೇ ಎಷ್ಟು ದಿನಗಳು ಕಳೆದವು! ಆನಂದವಾಗುತ್ತಿತ್ತು. ಸುತ್ತಲೂ ನೋಡುವಾಗ ಎಷ್ಟೋ ದಿನಗಳಿಂದ ಪರಿಚಯವಿದ್ದು ಬಿಟ್ಟುಬಂದ ಸ್ಥಳ ಅನ್ನಿಸುತ್ತಿತ್ತು.

ಟಿಬೆಟ್ಟಿನಲ್ಲಿ ಹಿಮದಿಂದ ನನ್ನನ್ನೆತ್ತಿ ಬಹುಶಃ ನಗ್ನಾವಸ್ಥೆಯಲ್ಲಿ ಬೌದ್ಧಮಠಕ್ಕೆ ಕರೆದುಕೊಂಡು ಹೋಗಿದ್ದರು. ಹಿಮದಲ್ಲಿ ಮರಗಟ್ಟಿ ಹೋಗಿದ್ದೆ. ನೀವೆಲ್ಲ ಶಿಷ್ಯ ಸಂತಾನರು, ನಿಮಗೆ ಹೇಳಿ ಏನು ಲಾಭ? ಶರೀರದ ಲಕ್ಷಣವನ್ನು ನೋಡಿ ಅವರೆಂದರು 'ಗೇ–ಲಾಮ್' ಅರ್ಥಾತ್ ಆಕುಮಾರ ಬ್ರಹ್ಮಚಾರಿ. ಅವರ ದೇಶದಲ್ಲಿ 'ಗೇ–ಲಾಮ್' ಎಂದರೆ ಭಾರೀ ಗೌರವ. ನನಗೆಂದರು, 'ಇಲ್ಲಿಯೇ ಇದ್ದುಬಿಡಿ' ಅಂತ. ಠಾಕೂರರ ಚಿತ್ರವನ್ನು ನನ್ನಿಂದ ತೆಗೆದುಕೊಂಡು ವೇದಿಕೆಯ ಮೇಲಕ್ಕೆ ಬುದ್ಧನ ಬಳಿ ಅದನ್ನಿಟ್ಟು ಆರತಿ ಮಾಡಿದರು. ಕೇಳಿದರು, 'ಈತ ಯಾರು? ಈ ಕಣ್ಣುಗಳು ಮನುಷ್ಯರದಲ್ಲ, ಇವನು ಭಗವಂತ, ಇವನು ಬುದ್ಧ.' ಕೊನೆಗೆ ಚಿತ್ರವನ್ನು ಕೊಟ್ಟರು. ಒಂದೊಂದು ಬೌದ್ಧ ಮಠದಲ್ಲಿ ೪,೦೦೦ – ೭,೦೦೦ ಮಂದಿ ಸಾಧು ಗಳು ಇದ್ದರು. ಅಲ್ಲಿ ಚಹಾಗೆ ನೀರು ಕುದಿಸುತ್ತಲೇ ಇದ್ದರು. ಇದು ಎಲೆಯ ಚಹಾ ಅಲ್ಲ – ಟ್ಯಾಬ್ಲೆಟ್ ಚಹಾ. ಬಿಸಿನೀರು ತೆಗೆದು ಕೊಂಡು ಇಷ್ಟ ಬಂದಾಗ, ಇಷ್ಟ ಬಂದಷ್ಟು ಕುಡಿಯುವುದು. ಚಹಾ ಕುಡಿಯದಿದ್ದರೆ ಮೈಕೈ ಮರಗಟ್ಟಿ ಹೋಗುವುದು. ಮಧ್ಯದಲ್ಲಿ ಬೆಂಕಿ ಉರಿಯುತ್ತಿದೆ – ಚಹಾದ ನೀರು ಕುದಿಯುತ್ತಿದೆ. ನಾಲ್ಕು ದಿಕ್ಕುಗಳಲ್ಲೂ ಗೋಡೆಗಳಲ್ಲಿ ಇಟ್ಟಿಗೆಯಿಂದ ಕಟ್ಟಿಸಿದ ಕುರ್ಚಿಗಳಂತೆ ಧ್ಯಾನದ ಆಸನಗಳು. ಚಹಾ ಕುಡಿಯುತ್ತಾರೆ, ಸ್ವಲ್ಪ ಮಾಂಸ ತಿನ್ನುತ್ತಾರೆ, ಮತ್ತೆ ಧ್ಯಾನಕ್ಕೆ ಕುಳಿತುಕೊಳ್ಳುತ್ತಾರೆ.

ನಾನು ಟಿಬೆಟ್ಟಿನ ಭಾಷೆಯನ್ನು ಕಲಿತುಬಿಟ್ಟಿದ್ದೆ. ಅಲ್ಲಿನ ಮಹಿಳೆ ಯರು ಹೇಳುತ್ತಿದ್ದರು, 'ನಿನಗೆ ತಾಯಿ, ಸೋದರಿಯರು ಯಾರೂ ಇಲ್ಲವೆ? ಒಳ್ಳೆಯದು, ಇಲ್ಲಿಯೇ ಮದುವೆ ಮಾಡಿಕೊಳ್ಳಬಾರ ದೇಕೆ?' ನಾನೆನ್ನುತ್ತಿದ್ದೆ, 'ನೀವೆಲ್ಲರೂ ನನ್ನ ತಾಯಂದಿರು. ಯಾರನ್ನು ಮದುವೆಯಾಗಲಿ, ಹೇಳಿ. ನಾನು ಸಂನ್ಯಾಸಿ. ತಾಸಿ ಲಾಮಾ political head (ರಾಜಕೀಯ ಮುಖಂಡ), ದಲಾಯ್ ಲಾಮಾ spiritual head (ಆಧ್ಯಾತ್ಮಿಕ ಮುಖಂಡ). ಆ ಪಂಗಡವೇ spiritual – ಯಾವ ಲಾಮಾ ಯಾವಾಗ ಮೃತ ರಾದರೆಂದು ತಿಳಿದುಕೊಂಡಿರುತ್ತಾರೆ. ಅವರೆಲ್ಲಿ ಹುಟ್ಟುತ್ತಾರೆಂದು ತಿಳಿದುಕೊಂಡು, ಅವರನ್ನು ಕರೆದುಕೊಂಡು ಬಂದು ಲಾಮಾ ಪದವಿ ಯನ್ನು ನೀಡುತ್ತಾರೆ – ಅವರೆಷ್ಟು ಚಿಕ್ಕವರೇ ಆಗಿರಲಿ. ಒಬ್ಬ 'ಆಛಿ' ಇರುತ್ತಾರೆ – ಅವರೇ ಎಲ್ಲವನ್ನೂ ಮಾಡುತ್ತಾರೆ. ಒಮ್ಮೆ ಬ್ರಿಟಿಷ್ ರೀಜೆಂಟರೊಂದಿಗೆ ಮಾತುಕತೆಯಾಗುತ್ತಿದೆ, ಆಛಿ ಎಲ್ಲವನ್ನೂ ತಿಳಿಸಿ ಕೊಡುತ್ತಿದ್ದಾರೆ. ೧೮ ತಿಂಗಳು ವಯಸ್ಸಿನ ಲಾಮಾ ಕತ್ತನ್ನಾಡಿಸಿ approval (ಒಪ್ಪಿಗೆ) ಅಥವಾ disapproval (ಅಸಮ್ಮತಿ) ಸೂಚಿಸುತ್ತಿದ್ದಾರೆ. ಅವರು ಜಾತಿಸ್ಮರರಾಗಿರುತ್ತಾರೆ. ಪೂರ್ವಜನ್ಮದ ಎಲ್ಲಾ ವಿಷಯಗಳೂ ಅವರಿಗೆ ನೆನಪಿರುತ್ತದೆ. ❖

*(ಮುಂದುವರಿಯುವುದು)*

# ಆಧ್ಯಾತ್ಮಿಕ ಸಂಭಾಷಣೆ



## ಸ್ವಾಮಿ ಭೂತೇಶಾನಂದಜೀಯವರೊಂದಿಗೆ

ಕನ್ನಡ ಅವತರಣಿಕೆ : ಸ್ವಾಮಿ ಮಂಗಳಾತ್ಮಾನಂದ

**ಪ್ರಶ್ನೆ:** ವೈಶಾಖ ಮಾಸವನ್ನು thrice blessed day (ಮೂರು ಸಲ ಅನುಗ್ರಹಿಸಲ್ಪಟ್ಟದ್ದು) ಎಂದು ಏಕೆ ಹೇಳುತ್ತಾರೆ ಮಹಾರಾಜ್?

**ಮಹಾರಾಜ್:** ಭಗವಾನ್ ಬುದ್ಧನ ಜನನ, ಜನ್ಮ, ಜ್ಞಾನೋದಯ ಮತ್ತು ಮಹಾಸಮಾಧಿ ಆ ದಿನವೇ ಉಂಟಾಯಿತು.

**ಪ್ರಶ್ನೆ:** ಆರ್ಯ ಸತ್ಯಗಳೆಂದು ಏಕೆ ಹೇಳಲಾಗುತ್ತದೆ?

**ಮಹಾರಾಜ್:** ಆರ್ಯರಿಂದ ಪರೀಕ್ಷಿಸಿದ ಸತ್ಯ. ಇಲ್ಲಿ ಆರ್ಯ ವೆಂದರೆ ಒಂದು ಜಾತಿ, ಜನಾಂಗವಲ್ಲ, ಪೂಜ್ಯರು ಯಾರೋ ಅವರು ಆರ್ಯರು. ಒಬ್ಬರು ಸಾಧುಗಳ ಆರೋಗ್ಯವನ್ನು ವಿಚಾರಿಸುತ್ತ ಪೂಜ ನೀಯ ಹರಿ ಮಹಾರಾಜರು (ಸ್ವಾಮಿ ತುರೀಯಾನಂದರು), 'ಶರೀರಕ್ಕೆ ತಿಳಿದಿರುವುದು ದುಃಖವೊಂದೆ. ಹೇ ಮನಸ್ಸೇ, ನೀನು ಆನಂದದಲ್ಲಿರು' ಎಂದರು. ಶ್ರೀರಾಮಕೃಷ್ಣರ ಈ ಮಾತನ್ನು ಹರಿ ಮಹಾರಾಜರು ಬಾರಿ ಬಾರಿಗೂ ಹೇಳುತ್ತಿದ್ದರು. ಶ್ರೀರಾಮಕೃಷ್ಣರು ಹೀಗೆ ಬೇರೆ ಯಾರಿಗಾದರೂ ಈ ಮಾತನ್ನು ಹೇಳುತ್ತಿದ್ದರೋ ಇಲ್ಲವೋ ಎಂಬುದರ ಉಲ್ಲೇಖವಿಲ್ಲ.

**ಪ್ರಶ್ನೆ:** ಮಹಾರಾಜ್, ನಿರ್ವಾಣ ಎಂದರೇನು?

**ಮಹಾರಾಜ್:** 'ನಾನೇ ದೇಹ' ಎಂಬ ಬುದ್ಧಿಯಿಂದ ನಿವೃತ್ತಿ; ಚಿತ್ತ ವೃತ್ತಿ, ಭೋಗೇಚ್ಛೆ, ಆಸೆ ಆಕಾಂಕ್ಷೆಗಳಿಂದ ನಿವೃತ್ತಿ. ಇದರಿಂದ 'ನಾನು, ನಾನು' ಎಂಬುದು ಕೊನೆಗೊಳ್ಳುತ್ತದೆ. ದೀಪವು ಆರಿ ಹೋಗುತ್ತದೆ.

**ಪ್ರಶ್ನೆ:** ಹಾಗಾದರೆ ಏನು ಉಳಿಯಿತು?

**ಮಹಾರಾಜ್:** ಏನೂ ಉಳಿಯುವುದಿಲ್ಲ. ನಿನಗೆ 'ನಾನು' ಎಂಬುದು ಉಳಿಯಬೇಕೇನು?

**ಪ್ರಶ್ನೆ:** 'ನಾನು' ಇಲ್ಲದೆ ಹೋದರೆ ಯಾರಿಗೆ ಲೋಪವಾಯಿತು?

**ಮಹಾರಾಜ್:** ಸಾಧಕರಿಗೆ. ಯಾರು ಈ ದಾರಿಯಲ್ಲಿ ನಡೆಯುತ್ತಾರೋ ಅವರಿಗೆ.

**ಪ್ರಶ್ನೆ:** ಸಾಧಕರಿಲ್ಲದಿದ್ದರೆ ನಿರ್ವಾಣ ಯಾರಿಗೆ?

**ಮಹಾರಾಜ್:** ಉರಿಯುವ ದೀಪವು ಆರಿಹೋದಾಗ ನಿರ್ವಾಣವಾಗುತ್ತದೆ. ಭೋಗೇಚ್ಛೆ ಎಂಬ ಎಣ್ಣೆಯ ಮೂಲಕ ದೀಪವು ಉರಿಯುತ್ತಿತ್ತು. ಎಣ್ಣೆ ಮುಗಿಯಿತು ಎಂದರೆ ದೀಪ ಆರಿತು ಎಂದರ್ಥ.

**ಪ್ರಶ್ನೆ:** ಇದು ನೊಣವನ್ನು ಕೊಲ್ಲುವ ಬದಲು ಮನುಷ್ಯನನ್ನು ಕೊಂದ ಹಾಗಾಯಿತು.

**ಮಹಾರಾಜ್:** ನೀನು ಸಂಕುಚಿತ ದೃಷ್ಟಿಕೋನದಿಂದ ನೋಡುತ್ತಿದ್ದೀ. ಅಂದರೆ ನೀನು ಮನುಷ್ಯನನ್ನು ಬದುಕಿಸಲು ನೋಡುತ್ತೀಯ. ಇದರರ್ಥ, ಭೋಗೇಚ್ಛೆಯ ನಿರ್ವಾಣದಿಂದ ಎಲ್ಲ ವಾಸನೆಗಳೂ ಹೊರಟುಹೋಗುತ್ತವೆ.

**ಪ್ರಶ್ನೆ:** ಹಾಗಾದರೆ ನಿರ್ವಾಣ ಯಾರಿಗೆ?

**ಮಹಾರಾಜ್:** 'ಸತ್ಯವಿದೆಯೆ?' ಇದು ಯಾರಾದರೂ ಕೇಳುವ ಪ್ರಶ್ನೆಯಾಗಿದ್ದರೆ ಆಗ ನಿರ್ವಾಣವು ಯಾರಿಗೆ ಎಂಬ ಪ್ರಶ್ನೆ ಬರುತ್ತದೆ. ಯಾವುದಕ್ಕೆ 'ದೀಪಶಿಖೆ' ಎನ್ನುವೆವು? ಉರಿಯುವ ದೀಪದ ಕುಡಿಗಳೇ ಆಸೆ-ಆಕಾಂಕ್ಷೆಗಳು. ದೀಪಶಿಖೆಗಳು ಆರಿ ಹೋದರೆ ಏನು ಉಳಿಯಿತು? ಮನುಷ್ಯನಿಗೆ ಏನು ಬೇಕು? ದುಃಖದ ನಿವೃತ್ತಿ. ಯಾರ ದುಃಖದ ನಿವೃತ್ತಿ? ಯಾರು ದುಃಖ, ಬಂಧನಗಳಲ್ಲಿದ್ದಾರೋ ಆತನಿಗೆ ದುಃಖದಿಂದ ನಿವೃತ್ತಿ ಬೇಕು. ಯಾರ ದುಃಖ ಹೊರಟು ಹೋಯಿತೋ ಅಲ್ಲಿ ದುಃಖವೆಲ್ಲಿ ನಿಲ್ಲುತ್ತದೆ?

**ಪ್ರಶ್ನೆ:** 'ನಾನು' ಎಂಬುದರ ನಾಶವನ್ನು ಮನುಷ್ಯ ಬಯಸುತ್ತಾನೆಯೆ?

**ಮಹಾರಾಜ್:** ಸಾಮಾನ್ಯ ಜನರು ಈ ಸಂಸಾರದ ಆನಂದವನ್ನು ಸವಿಯಲು ಇಷ್ಟಪಡುತ್ತಾರೆ. ಹಾಗಾಗಿ ಈ 'ನಾನು' ಎನ್ನುವುದು ಜೀವಂತ ಉಳಿಯುತ್ತದೆ. ಯಾರು 'ನಾನು' ಎಂಬ ಈ ಬಂಧನದ ಅರ್ಥವನ್ನು ತಿಳಿಯುತ್ತಾನೋ ಆತನ ಬಂಧನಗಳೆಲ್ಲ ಹೊರಟು ಹೋಗುತ್ತವೆ. ನಾನು, ನೀನು ಯಾವುದೂ ಉಳಿಯುವುದಿಲ್ಲ. ಬ್ರಹ್ಮಸ್ವರೂಪದಲ್ಲಿ ನಾನು-ನೀನು ಯಾವುದೂ ಉಳಿಯುವುದಿಲ್ಲ.

**ಪ್ರಶ್ನೆ:** ಅನಂತ ಜೀವನದ ಬಗ್ಗೆ ಹೇಳಲಾಗಿದೆ, ಅದು ಯಾರಿಗೆ?

**ಮಹಾರಾಜ್:** ಸಾಧಕರಿಗೆ. ಸಾಧಕನು 'ನಾನೇ ಬ್ರಹ್ಮ' ('ಅಹಂ ಬ್ರಹ್ಮಾಸ್ಮಿ') ಎಂದು ಚಿಂತಿಸುತ್ತಿದ್ದರೆ, 'ನಾನು' ಹೊರಟುಹೋಗಿ ಬ್ರಹ್ಮವೇ ಉಳಿಯುತ್ತದೆ.

**ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।**
**ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥** *(ಕಠ, ೨.೧.೧೫)*

ಹೇಗೆಂದರೆ, ಒಂದು ಬಿಂದು ಶುದ್ಧಜಲವನ್ನು ಶುದ್ಧವಾದ ಜಲ ರಾಶಿಗೆ ಹಾಕಿದರೆ ಅದರಲ್ಲಿ ಆ ಬಿಂದು ಒಂದಾಗಿ, ಹುಡುಕಿದರೂ ಸಿಗದ ಹಾಗೆ ಜ್ಞಾನಿ ಅಥವಾ ಬ್ರಹ್ಮಜ್ಞಾನಿಯ 'ನಾನು' ಎಂಬ ರೂಪದ ಬಂಧನ ಕಳಚಿ, ಬ್ರಹಜ್ಞಾನಿಯಾಗುತ್ತಾನೆ. ಬ್ರಹ್ಮಜ್ಞನಲ್ಲ, ಬ್ರಹ್ಮಸ್ವರೂಪದ ಸ್ಥಿತಿಯಲ್ಲಿರುತ್ತಾನೆ; ಬ್ರಹ್ಮಸ್ಥಿತಿಯಲ್ಲಿರುತ್ತಾನೆ. ಆರೋಪವೆಲ್ಲ ಹೊರಟುಹೋಗುತ್ತದೆ. ಇದೇ ಶಂಕರಾಚಾರ್ಯರ ಗ್ರಂಥದಲ್ಲಿರುವುದು. ಅವಿದ್ಯೆ (ಭ್ರಾಂತಿ, ಅಜ್ಞಾನ) ಯಾರದು? ಅವಿದ್ಯೆ ಯಾರದೋ ಆತನದೆ. 'ನಾನು' ಎಂಬುದೇ ಅವಿದ್ಯೆಯಲ್ಲಿ ಸಿಲುಕಿಕೊಂಡಿದೆ. ಹಾಗಾದರೆ ಏಕೆ ಪ್ರಶ್ನೆ ಹಾಕುತ್ತಿದ್ದೀಯಾ? ಇದೆಲ್ಲ ತರ್ಕಸಿದ್ಧಾಂತ. ಅವಿದ್ಯೆಯಿಂದಲೇ 'ನಾನು' ಉದ್ಭವಿಸುವುದು. ಅವಿದ್ಯೆ ನಾಶವಾದರೆ 'ನಾನು'ವಿನ ನಿವೃತ್ತಿಯಾಗುತ್ತದೆ. ವೇದಾಂತಿಗಳು ಹೇಳುತ್ತಾರೆ, ಆರೋಪಗಳೆಲ್ಲ (ಭ್ರಾಂತಿಯಿಂದ ಒಂದು ವಸ್ತುವಿನಲ್ಲಿ ಇನ್ನೊಂದನ್ನು ಕಾಣುವುದು) ಹೋದರೂ ಆರೋಪ

ಇದ್ದೇ ಇದೆ ಎಂದು. ಆಗ ಏನು ವಿವರಿಸಲು ಸಾಧ್ಯ? ಆಗ ಹೇಳು ವುದೇ, **ಅಶಬ್ದಮ್, ಅಸ್ಪರ್ಶಮ್, ಅರೂಪಮ್, ಅವ್ಯಯಮ್** ಎಂದು. ಶೂನ್ಯ ಮತ್ತು ಬ್ರಹ್ಮಕ್ಕೆ ಹೆಚ್ಚಿನ ವ್ಯತ್ಯಾಸವಿಲ್ಲ, ಒಂದೇ. ಬೌದ್ಧರ ಶೂನ್ಯವೆಂದರೆ ಜಗತ್ತಿನ ಶೂನ್ಯವಲ್ಲ, ಜಗತ್ತಿನ ಆರೋಪ. ಆದ ಕಾರಣ ಶೂನ್ಯದಿಂದ ನಿವೃತ್ತಿ ಆಗಬೇಕು.

**ಪ್ರಶ್ನೆ:** ಜಟಿಲ ತತ್ತ್ವವನ್ನು ಕೊಟ್ಟೂ ಬುದ್ಧ ಹೇಗೆ ಜನಪ್ರಿಯನಾದ?

**ಮಹಾರಾಜ್:** ಬುದ್ಧನು ಯಾವುದೇ ತರ್ಕಗ್ರಂಥಗಳನ್ನು ರಚಿಸ ಲಿಲ್ಲ. ಬುದ್ಧನು ಹೇಳುತ್ತಿದ್ದ ಮನುಷ್ಯನಲ್ಲಿರುವ ವಾಸನಾ ನಿವೃತ್ತಿ, ಬಹಳ practical (ಪ್ರಾಯೋಗಿಕ) ವಿಚಾರ. ಉದಾಹರಣೆಯ ಮೂಲಕ ಅವನು ಹೇಳುತ್ತಾನೆ: ಒಬ್ಬನ ದೇಹಕ್ಕೆ ಒಂದು ಬಾಣ ತಗುಲಿದೆ, ಆತನನ್ನು ಪ್ರಶ್ನಿಸಲಾಗುತ್ತಿದೆ – 'ಬಾಣ ಯಾವ ದಿಕ್ಕಿನಿಂದ ಬಂತು? ಬಾಣ ಎಷ್ಟು ದೊಡ್ಡದು?' ಇತ್ಯಾದಿ. ಬಾಣ ತಗುಲಿಸಿಕೊಂಡವ ಹೇಳುತ್ತಿದ್ದಾನೆ, 'ಅಯ್ಯೋ ಮೊದಲು ಬಾಣವನ್ನು ತೆಗೆಯಿರಿ. ಅನಂತರ ಅದು ಎಲ್ಲಿಂದ ಬಂತು, ಹೇಗೆ ಬಂತು ಇತ್ಯಾದಿ ವಿಚಾರಿಸೋಣ' ಅಂತ. ಹೀಗೆ, ವಿಚಾರ ಏಕೆ? ನೇರ ವಾಸನಾನಿವೃತ್ತಿಗಾಗಿ ಯತ್ನಿಸಿ.

ನನಗೆ ಎಷ್ಟೋ ಜನ ಬಂದು ಹೇಳುತ್ತಾರೆ, 'ಮಹಾರಾಜ್ ಮನೆಯಲ್ಲಿ ಎಷ್ಟೊಂದು ಅಶಾಂತಿ, ಹೇಗೆ ಇದನ್ನು ಪರಿಹರಿಸಲಿ?' ನಾನು ಹೇಳುತ್ತೇನೆ, 'ಒಂದು ಉಪಾಯವಿದೆ!' ಅವರು ಕುತೂಹಲ ಭರಿತರಾಗಿ ಕೇಳುತ್ತಾರೆ, 'ಏನು ಉಪಾಯ?' 'ವಾಸನೆಯ ನಿವೃತ್ತಿ' ಎಂದು ನಾನು ಹೇಳಿದರೆ, ಕೆಲವರು ಹೇಳುತ್ತಾರೆ, 'ನನಗೆ ಯಾವುದೇ ಬಯಕೆಯಿಲ್ಲ!' ಅಂತ. ಅಂದರೆ ನಿಮಗೆ ದುಃಖವೇ ಇಲ್ಲ, ಪ್ರಾಪ್ತವಲ್ಲದ ವಸ್ತು ಸಿಗಬೇಕು ಎನ್ನುವುದೇ ಮನಸ್ಸಿನ ಆಕಾಂಕ್ಷೆ. ಅದಕ್ಕೇ ಹೇಳುವುದು 'ವಾಸನೆ' ಎಂದು. ಬಯಕೆಯೇ ಇಲ್ಲವೆಂದ ಮೇಲೆ ದುಃಖವೆಲ್ಲಿಂದ? ಇನ್ನು ಕೆಲವರು ಹೇಳುವುದುಂಟು, – 'ಸಂಸಾರವೇ ಬೇಡ.' ಸರಿ ಇನ್ನೇನು ಬೇಕು ಎಂದು ಕೇಳಿದರೆ, 'ಸಂಸಾರದಲ್ಲಿರಬೇಕು. ಆದರೆ ದುಃಖ, ಕಷ್ಟಗಳಿರಬಾರದು' ಎನ್ನುತ್ತಾರೆ. ಅವರಿಗೆ ಗಂಡ-ಹೆಂಡತಿ, ಮಕ್ಕಳು ಇತರರು ಎಲ್ಲ ಇಲ್ಲಿಯೇ ಅಮರರಾಗಿರಬೇಕು. ಗಗನ ಕುಸುಮದಂತೆ ಇದೆಲ್ಲ ಕಲ್ಪನೆ. ಇದನ್ನೆಲ್ಲ ದಾಟಿಹೋಗಬೇಕು. ಉಪನಿಷತ್ ಅದನ್ನೇ ಹೇಳುತ್ತದೆ. ನೀವೆಲ್ಲ ಜಪಧ್ಯಾನ ಮಾಡುವಾಗ 'ನಾನೇ ಬ್ರಹ್ಮ' ಎಂಬುದರ ಬಗ್ಗೆ ಎಷ್ಟು ಚಿಂತನೆ ಮಾಡುತ್ತೀರಿ?

**ಪ್ರಶ್ನೆ:** ಸಂನ್ಯಾಸಿಗಳು ಬ್ರಹ್ಮ ಚಿಂತನೆಯನ್ನು ತಾನೇ ಮಾಡುವುದು?

**ಮಹಾರಾಜ್:** ಆತ್ಮಚಿಂತನೆಯನ್ನು ಯಾರೂ ಮಾಡುವುದಿಲ್ಲ. ಸುಮ್ಮನೆ ಯಾಂತ್ರಿಕವಾಗಿ (ದಿನಚರಿಯಂತೆ) ನಡೆಯುತ್ತದೆ.

**ಪ್ರಶ್ನೆ:** ಬ್ರಹ್ಮಚಿಂತನೆಯಲ್ಲದೆ ಸಾಧುಗಳು ಇನ್ನೇನು ಮಾಡುತ್ತಾರೆ?

**ಮಹಾರಾಜ್:** ಯಾವ ವಸ್ತುವನ್ನು ಹಿಡಿಯಲು ಆಗುತ್ತಿಲ್ಲವೋ ಅದರ ಧ್ಯಾನ ಹೇಗೆ ಮಾಡುತ್ತಾರೆ? ಮೊದಲು ಆತ್ಮಚಿಂತನೆ ಮಾಡು – 'ನಾನು ಯಾರು?' ಅನಂತರವೇ ಬ್ರಹ್ಮಚಿಂತನೆ – 'ಅಹಂ ಬ್ರಹ್ಮಾಸ್ಮಿ.' ಬರಿ ಬಾಯಲ್ಲಿ 'ಬ್ರಹ್ಮ ಚಿಂತನೆ' ಎಂದರೆ ಏನರ್ಥ? ಬ್ರಹ್ಮವಸ್ತುವನ್ನು ಹಾಗೆ ಹಿಡಿಯಬಹುದೆ? **'ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್'** ಹೀಗೆ ಬ್ರಹ್ಮಚಿಂತನೆ ಮಾಡುತ್ತಿಯಾ?

**ಪ್ರಶ್ನೆ:** ಹಾಗಾದರೆ, **'ಮನಸಾ ಏವ ಅನುಪಶ್ಯಂತ'** ಎಂದಾಗಲಿ.

**ಮಹಾರಾಜ್:** ಅದು ಸರಿ, ಮನಸ್ಸು ಪರಿಶುದ್ಧವಾದರೆ 'ಅದೇ ಇದು, ಅದೇ ಇದು' ಎನ್ನುವ ವಿಚಾರ ಬಾರದು. ಆಗ ವಿಚಾರನಿವೃತ್ತಿ ಆಗುತ್ತದೆ. ಆಗ ಏನು ಉಳಿಯುತ್ತದೋ ಅದು ಶುದ್ಧ ಅನುಭವ, ಅದೇ ಅದ್ವೈತ.

**ಪ್ರಶ್ನೆ:** ಮಹಾರಾಜರೆ, ಈ ಹಿಂದಿನ ಒಂದು ಪ್ರಶ್ನೆಗೆ ಉತ್ತರಿಸುತ್ತ ತಾವು ಹೇಳಿದ್ದಿರಿ – ನಮ್ಮ ಅಸ್ತಿತ್ವ ಎಂದರೇನು, ಇದನ್ನು ವಿಚಾರ ಮಾಡುತ್ತ, ಹೋದರೆ, ಎಲ್ಲವೂ ಶೂನ್ಯವಾಗುತ್ತದೆ. ಹುಡುಕಲು ಹೋದ ಅಸ್ತಿತ್ವ ಏನೂ ಸಿಗದು. ಇದು ನಮ್ಮ ಸ್ವರೂಪ. ಈಗ ನಮ್ಮ ಪ್ರಶ್ನೆ – 'ಏನೂ ಸಿಗುವುದಿಲ್ಲ'ವೆಂಬುದರ ಅರ್ಥ ಬ್ರಹ್ಮಶೂನ್ಯವೆ?

**ಮಹಾರಾಜ್:** ಶೂನ್ಯ – ಇದೊಂದು ಒಳ್ಳೆಯ ವ್ಯಾಖ್ಯಾನವಾಯಿತಷ್ಟೆ. ಹಾಗಲ್ಲ; ಅದು ಶಬ್ದಾತೀತ.

**ಪ್ರಶ್ನೆ:** ಇದನ್ನು ತಾವು ಶ್ರುತಿಯಿಂದ ಹೇಳುತ್ತಿದ್ದೀರಿ. ಆದರೆ ಇದು ಯಾವ ದೃಷ್ಟಿಯಿಂದ, ಯಾವ ಯುಕ್ತಿಯಿಂದ ಅಂತ ಹೇಳಲು ಸಾಧ್ಯವೆ? – ಶಬ್ದಾತೀತ ವಸ್ತು ಇದೆಯೆ?

**ಮಹಾರಾಜ್:** ಯುಕ್ತಿ ಇಲ್ಲಿ ಕೆಲಸಮಾಡದು. ಇಲ್ಲಿಯೇ ತೊಂದರೆ ಬರುವುದು. ಎಲ್ಲಿ ಯಾವ ವಸ್ತು ಕೆಲಸಮಾಡದೋ ಅಲ್ಲಿ ಅದನ್ನು ಪ್ರಯೋಗ ಮಾಡಿ ಏನು ಪ್ರಯೋಜನ?

**ಪ್ರಶ್ನೆ:** ಅದನ್ನೇ ನಾವು ಹೇಳುವುದು, ಸಿದ್ಧಾಂತಿ ಹೇಳುತ್ತಾನೆ – 'ಬ್ರಹ್ಮವೇ ಸಿದ್ಧವಸ್ತು' ಅಂತ. ಹಾಗಾದರೆ ಸಿದ್ಧಾಂತಿಯೇ ಇದನ್ನೂ ಹೇಳಬಾರದಿತ್ತು.

**ಮಹಾರಾಜ್:** ಸಿದ್ಧಾಂತಿಯಲ್ಲ, ಸ್ವಯಂಸಿದ್ಧ.

**ಪ್ರಶ್ನೆ:** ಮಹಾರಾಜರೇ, ಸ್ವಯಂಸಿದ್ಧವಸ್ತು ಪುನಃ ಅದರ ಸಿದ್ಧಿ ಮಾಡಬೇಕಾಗುತ್ತದೆಯೆ? ಇದು ಹೇಗಾಗುತ್ತದೆ?

**ಮಹಾರಾಜ್:** ಸರ್ವಸಿದ್ಧಿ. ಸರ್ವವೆಂದರೆ ಅದು ಸಂಶಯಾತೀತ. ಅದಕ್ಕಾಗಿ ಅದಕ್ಕೆ ಪ್ರಮಾಣವೇ ಬೇಡ. ಎಲ್ಲವೂ ಸಂದೇಹಕ್ಕೆ ಅತೀತ. ನೀನು ಇದ್ದೀಯಾ, ನಿನ್ನ ಬಗ್ಗೆ ಏನಾದರೂ ಸಂದೇಹವಿದೆಯೆ?

**ಪ್ರಶ್ನೆ:** ಸಂದೇಹ ಇದೆ, ಮಹಾರಾಜರೆ.

**ಮಹಾರಾಜ್:** ಇದೆಯೆ? ಅದೇನು ಸಂದೇಹ?

**ಪ್ರಶ್ನೆ:** ಸಂದೇಹವಿಷ್ಟೇ – ನಾನು ಶರೀರವೇ, ಅಥವಾ ಮನಸ್ಸೇ, ಅಥವಾ ಇನ್ನೇನಾದರೂ ಹೌದೆ?

**ಮಹಾರಾಜ್:** ಇದು ನಿನ್ನ ಸ್ವರೂಪದ ಸಂದೇಹ. ನಿನ್ನ ಬಗ್ಗೆಯೇ ನಿನಗೆ ಸಂದೇಹವಿದ್ದರೆ, ಇನ್ನು ವಿಚಾರ ಹೇಗೆ ಮಾಡುತ್ತೀಯಾ?



ಸ್ವಾಮಿ ನಿತ್ಯಸ್ಥಾನಂದ

# ಭಕ್ತನ ಲಕ್ಷಣ




**ಭಾಗ - ೩**

**ದೃಢನಿಶ್ಚಯಃ** ನಾಲ್ಕು ಬಗೆಯ ಜನರಿರುತ್ತಾರೆ : ಏನೂ ಮಾಡದವರು, ಏನು ಮಾಡಬೇಕೆಂದು ತೋಚದವರು, ಏನೇನೋ ಮಾಡುವವರು ಮತ್ತು ನಿರ್ದಿಷ್ಟವಾಗಿಯೂ ನಿಶ್ಚಿತವಾಗಿಯೂ ಮಾಡುವವರು. ಈ ನಾಲ್ಕನೇ ವರ್ಗದವರ ಜೀವನದಲ್ಲಿ ಒಂದು ನಿರ್ದಿಷ್ಟತೆ ಇರುತ್ತದೆ, ಏಕೆಂದರೆ ಅವರ ಜೀವನಕ್ಕೆ ಒಂದು ನಿರ್ದಿಷ್ಟ ಆದರ್ಶವಿರುತ್ತದೆ. ಇದರಿಂದಾಗಿ ತಾವೇನು ಮಾಡಬೇಕೆಂದು ಅವರಿಗೆ ದೃಢವಾಗಿ ಗೊತ್ತಿರುತ್ತದೆ. ಆದರ್ಶಕ್ಕೆ ಅನುಗುಣವಾಗಿ ಅವರ ಮಾತು, ಕೃತಿ, ವರ್ತನೆಗಳು ನಿರ್ದಿಷ್ಟ ರೂಪದಲ್ಲಿ ಪ್ರವರ್ತಿಸುತ್ತವೆ. ಭಕ್ತನು ಭಗವದಾದರ್ಶಕ್ಕೆ ಅನುಸಾರವಾಗಿ ಜೀವಿಸುವುದರಿಂದ ಅವನು ದೃಢನಿಶ್ಚಯನು.

ಶ್ರೀರಾಮಕೃಷ್ಣರು ದೃಢನಿಶ್ಚಯನಿಗೆ ಒಂದು ಉದಾಹರಣ ರೂಪದ ಕಥೆಯನ್ನು ಹೇಳುತ್ತಾರೆ: ಇಬ್ಬರು ರೈತರು ಇರುತ್ತಾರೆ. ಅನಾವೃಷ್ಟಿಯ ದೆಸೆಯಿಂದ ಹೊಲಕ್ಕೆ ನೀರಿಲ್ಲದೆ ಬೆಳೆ ತೆಗೆಯುವುದೇ ಕಷ್ಟಸಾಧ್ಯವಾದ ಪರಿಸ್ಥಿತಿ. ಬೆಳೆಯಿಲ್ಲದಿದ್ದರೆ ಊಟವೂ ಇಲ್ಲ. ಒಬ್ಬ ರೈತನು ಹೇಗಾದರೂ ಮಾಡಿ ಹೊಲಕ್ಕೆ ನೀರು ಹಾಯಿಸಬೇಕೆಂದು ದೃಢನಿಶ್ಚಯ ಮಾಡುತ್ತಾನೆ. ಒಂದು ದಿನ ಮುಂಜಾನೆ ಗುದ್ದಲಿ, ಹಾರೆ ಹೆಗಲ ಮೇಲೇರಿಸಿ ಮನೆಯಿಂದ ಹೊರಟ. ಪಕ್ಕದ ನದಿಯಿಂದ ಕಾಲುವೆಯ ಮೂಲಕ ನೀರನ್ನು ತರುವುದೆಂಬುದು ಅವನ ನಿಶ್ಚಯ. ಅವನು ಕಾಲುವೆ ಅಗೆಯಲು ಪ್ರಾರಂಭಿಸುತ್ತಾನೆ. ಸ್ವಲ್ಪ ಹೊತ್ತಿನಲ್ಲಿ ಅವನ ಮಗಳು ಬಂದು ಕಾಫಿ ಕುಡಿದುಕೊಂಡು ಹೋಗಲು ಕರೆಯುತ್ತಾಳೆ. ರೈತನು ಅವಳನ್ನು ಬೈದು ಮನೆಗೆ ಕಳಿಸುತ್ತಾನೆ. ಆಗಲೇ ಮಧ್ಯಾಹ್ನವಾಗುತ್ತಾ ಬಂತು. ದಣಿವರಿಯದೆ ರೈತನ ಕೆಲಸ ಮುಂದೆ ಸಾಗಿದೆ. ಈಗ ಅವನ ಪತ್ನಿ ದಾಪುಗಾಲು ಹಾಕುತ್ತ ಬರುತ್ತಾಳೆ. ರೈತನಿಗೆ ಆಕಡೆ ಗಮನವೇ ಇಲ್ಲ. ಅವಳು ದರ್ಪದಿಂದ, ಅಧಿಕಾರ ವಾಣಿಯಿಂದ ಗಂಡನನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ, ''ಏನ್ರೀ, ನೀವು ಯಾವಾಗಲೂ ಹೀಗೇನೆ. ನಡೀರಿ ಮನೆಗೆ! ಸ್ನಾನ ಇಲ್ಲ, ಊಟ ಇಲ್ಲ. ನದಿ ಏನು ಓಡಿಹೋಗುತ್ತ?'' ಎಂದು ಗದರಿಸಿದಳು. ವಾಸ್ತವತೆಯ ಆಳ ಅರಿವಿದ್ದ ರೈತನಿಗೆ ಇದನ್ನು ಸಹಿಸಲಾಗಲಿಲ್ಲ. ಏನೆಂದೆ? ನಿನಗೆ ಬುದ್ಧಿ ಇಲ್ವಾ? ಮಳೆ ಇಲ್ಲ , ಬೆಳೆ ಇಲ್ಲ! ನಮಗೆ ಯಾರು ಊಟ ಕೊಡುತ್ತಾರೆ? ಮಣ್ಣು ತಿನ್ನಬೇಕಷ್ಟೆ. ಹೊರಟುಹೋಗು, ಇಲ್ಲಿಂದ. ಹೋಗುತ್ತೀ ಇಲ್ವೋ? ಎಂದು ಹಾರೆಯನ್ನು ತೆಗೆದುಕೊಂಡು ಆಕೆಯನ್ನು ಹೊಡೆಯಲು ಹೋದ, ಆಕೆ ಹೆದರಿ ಓಡಿದಳು.

ರೈತನು ಸಂಜೆಯವರೆಗೂ ಎಡೆಬಿಡದೆ ಕೆಲಸ ಮಾಡಿ, ಕಾಲುವೆಯ ಮೂಲಕ ನದಿಯ ನೀರು ಜುಳುಜುಳನೆ ಹರಿದು ತನ್ನ ಹೊಲಕ್ಕೆ ನೀರುಣಿಸುವುದನ್ನು ನೋಡಿ ಪರಮಾನಂದಭರಿತನಾಗಿ ಮನೆಗೆ ಹಿಂತಿರುಗಿದನು. ಅನಂತರ ಎಣ್ಣೆಸ್ನಾನ ಮಾಡಿ, ಚೆನ್ನಾಗಿ ಉಂಡು, ಸಂತೋಷದಿಂದ ಮಲಗಿ ಗಾಢ ನಿದ್ರೆಗೆ ವಶನಾದನು. ನೆರೆಯ ಇನ್ನೊಬ್ಬ ರೈತನು ಇದೇ ರೀತಿ ನೀರಿಗಾಗಿ ಹೋದನು. ಆದರೆ ಅವನ ಹೆಚ್ಚಿನ ಸಮಯ ಟೀ ಕುಡಿಯುವುದು, ಬೀಡಿ ಸೇದುವುದು, ಊಟ ಮಾಡುವುದು, ಹರಟೆ ಹೊಡೆಯುವುದು, ವಿಶ್ರಾಂತಿ ಪಡೆಯುವುದು ಇವುಗಳಲ್ಲೇ ಕಳೆದುಹೋಯಿತು. ಅವನು ಹೊಲಕ್ಕೆ ನೀರುಣಿಸುವುದರಲ್ಲಿ ಯಶಸ್ವಿಯಾಗಲಿಲ್ಲ. ದೃಢನಿಶ್ಚಯದಿಂದಲೇ ಕಾರ್ಯಸಿದ್ಧಿ.

**ಮಯ್ಯರ್ಪಿತಮನೋಬುದ್ಧಿಃ**

ಭಕ್ತನು ಮನಸ್ಸು ಬುದ್ಧಿಗಳೆರಡನ್ನೂ ಭಗವಂತನಿಗೇ ಅರ್ಪಿಸಿರುತ್ತಾನೆ. ಮನಸ್ಸು ಯಾವಾಗಲೂ ವಿಷಯ ಚಿಂತನೆಯಲ್ಲಿಯೇ ತೊಡಗಿರುತ್ತದೆ, ಅಂದರೆ ವಿಷಯಾರ್ಪಿತವಾಗಿರುತ್ತದೆ. ನಾವು ನಮ್ಮ ಮನಸ್ಸನ್ನು ತೊಡಗಿಸಿ (investing) ವಿಷಯ ವ್ಯಾಪಾರದಲ್ಲಿ ತೊಡಗಿದ್ದೇವೆ. ಈ ವ್ಯಾಪಾರದಲ್ಲಿ ನಾವು ಏನಾದರೂ ಲಾಭ ಅನುಭವಿಸುತ್ತಿದ್ದೇವೆಯೆ? ಇಲ್ಲ, ಬರಿಯ ನಷ್ಟವನ್ನು - ಶಾಂತಿಯ ನಷ್ಟವನ್ನು. ಅಷ್ಟೇ ಅಲ್ಲ, ದೇಹಾರೋಗ್ಯವನ್ನೂ ಕಳೆದುಕೊಳ್ಳುತ್ತೇವೆ. ಕೊನೆಯಲ್ಲಿ ಇಡೀ ಜೀವನವೇ ಹೀಗೆ ಕಳೆದು ಹೋಗುತ್ತದೆ. ಅನೇಕರಿಗೆ ಜೂಜಾಟದಲ್ಲಿ ಆಸಕ್ತಿ. ಎಷ್ಟೇ ಹಣವನ್ನು ಕಳೆದುಕೊಂಡರೂ ಈ ಜೂಜಾಟದ ಹುಚ್ಚು ಬಿಡುವುದಿಲ್ಲ. ಹೀಗೆಯೇ ನಾವು ಎಷ್ಟೇ ಕಳೆದುಕೊಳ್ಳುತ್ತಿದ್ದರೂ ಈ ವಿಷಯಾಸಕ್ತಿ ಬಿಡುವುದಿಲ್ಲ. ವಿಷಯನಿಷ್ಠೆಯಲ್ಲಿ ಬರಿಯ ನಷ್ಟ, ಆದರೆ ಅದನ್ನು ಬಿಡಲಾಗುವುದಿಲ್ಲ. ಭಗವನ್ನಿಷ್ಠೆಯಲ್ಲಿ ಬರಿಯ ಲಾಭ, ಆದರೆ ಅದನ್ನು ಪಡೆಯಲಾಗುವುದಿಲ್ಲ. ಶ್ರೀರಾಮಕೃಷ್ಣರು ಹೇಳುತ್ತಾರೆ: ಕಾದ ಕಾವಲಿಯ ಮೇಲೆ ನೀರು ಹಾಕಿದರೆ ತಕ್ಷಣವೇ ಆವಿಯಾಗಿ ಹೋಗುತ್ತದೆ. ಹಾಗೆಯೇ ವಿಷಯತಪ್ತ ಮನಸ್ಸಿನಲ್ಲಿ ಭಗವದ್‌ವಿಷಯ ನಿಲ್ಲುವುದಿಲ್ಲ. ವಿಷಯಾಸಕ್ತಿಯಿಂದ ನಾವು ಮೂರ್ಕ(ಮೂರ್ಖ)ರಾಗುತ್ತೇವೆ. 'ಮೂರ್ಕ' ಎಂದರೆ ಮೂರು 'ಕ' ವುಳ್ಳವನು - ಕಾಮ, ಕಾಂಚನ ಮತ್ತು ಕೀರ್ತಿ. ಈ ಮೂರು 'ಕ'ಗಳು ಇರುವವರೆಗೂ ಇನ್ನೊಂದು 'ಕ' ನಮ್ಮನ್ನು ಅನುಸರಿಸುತ್ತದೆ - ಕಷ್ಟ.

ವ್ಯಾಸರು ತಮ್ಮ ಯೋಗಸೂತ್ರ ಭಾಷ್ಯದಲ್ಲಿ ಹೇಳುತ್ತಾರೆ: **ಚಿತ್ತ ನದೀನಾಮ ಉಭಯತೋ ವಾಹಿನೀ, ವಹತಿ ಕಲ್ಯಾಣಾಯ ವಹತಿ ಪಾಪಾಯ ಚ।** – ಮನಸ್ಸಿಗೆ ಇಬ್ಬಗೆಯ ಪ್ರವಾಹಗಳಿವೆ – ಒಂದು ಒಳಿತಿನ ಕಡೆ, ಮತ್ತೊಂದು ಪಾಪದ ಕಡೆ. ನದಿಯನ್ನು ಸ್ವಾಭಾವಿಕವಾಗಿ ಹರಿಯಬಿಟ್ಟರೆ ಅದು ನೇರವಾಗಿ ಸಮುದ್ರವನ್ನೇ ಸೇರುತ್ತದೆ. ಆದರೆ ನಾವು ಅದಕ್ಕೆ ಅನೇಕ ಅಡೆತಡೆಗಳನ್ನು ಹಾಕಿ (ಅಣೆಕಟ್ಟು ಇತ್ಯಾದಿ) ಅದರ ನೀರನ್ನು ಬೇರೆ ಕಡೆ ಹರಿಸುತ್ತೇವೆ. ಹಾಗೆಯೇ ಚಿತ್ತನದಿಯ ಸ್ವಾಭಾವಿಕ ಪ್ರವೃತ್ತಿ ಭಗವನ್ಮುಖವಾಗಿ ಹರಿಯುವುದು – ತೈಲಧಾರೆಯಂತೆ. ಆದ್ದರಿಂದಲೇ ಭಗವಚ್ಚಿಂತನೆಯಲ್ಲಿ ನಮಗೆ ಅಷ್ಟೊಂದು ಆನಂದ ಲಭಿಸುವುದು. ಆದರೆ ಯಾವ ಅಡೆತಡೆಗಳಿಲ್ಲದೆ ಸ್ವಾಭಾವಿಕವಾಗಿ ಮನಸ್ಸು ಭಗವಂತನ ಕಡೆ ಹರಿಯುವ ಪ್ರವೃತ್ತಿ ಉಂಟಾಗುವವರೆಗೂ ತುಂಬ ಹೋರಾಟ ನಡೆಸಬೇಕಾಗುತ್ತದೆ.

ಮನಸ್ಸಿನಲ್ಲಿ ಸಾಮಾನ್ಯವಾಗಿ ಎರಡು ಬಗೆಯ ಆಲೋಚನೆಗಳು ಏಳುತ್ತಿರುತ್ತವೆ – ನಾಮವೃತ್ತಿ ಮತ್ತು ರೂಪವೃತ್ತಿ. ನಾಮವೃತ್ತಿಗಳಾವುವೆಂದರೆ ವಿವಿಧ ವಿಷಯಗಳಿಗೆ ಸಂಬಂಧಿಸಿದ ಶಬ್ದರೂಪದ ಚಿಂತನೆಗಳು. ಶಬ್ದಗಳು ಯಾವುದೇ ಭಾಷೆಯಲ್ಲಿರಬಹುದು. ನಾವು ಯಾವುದೇ ವಿಷಯವನ್ನು ಕುರಿತು ಚಿಂತಿಸುವಾಗ ಆ ವಿಷಯಕ್ಕೆ ಸಂಬಂಧಿಸಿದ ಶಬ್ದಗಳನ್ನು ಮನಸ್ಸಿನಲ್ಲಿ ಉಚ್ಚರಿಸುತ್ತೇವೆ. ಸೂಕ್ಷ್ಮವಾಗಿ ನಮ್ಮ ಮನಸ್ಸಿನ ಕಡೆ ಗಮನ ಹರಿಸಿದಾಗ ಇದು ನಮ್ಮ ಅರಿವಿಗೆ ಬರುತ್ತದೆ. ಇವಲ್ಲದೆ ರೂಪವೃತ್ತಿಗಳಿವೆ. ಮನುಷ್ಯ, ಪ್ರಾಣಿ, ಮರಗಿಡಗಳು, ಮೇಜು ಮುಂತಾದ ವಸ್ತುಗಳ ರೂಪಗಳು ನಮ್ಮ ಮನಸ್ಸಿಗೆ ಬರುತ್ತವೆ. ಟ್ರೈನು ಓಡಬೇಕಾದರೆ ಎರಡು ಹಳಿಗಳು ಬೇಕಾಗುತ್ತವೆ. ನಮ್ಮ ಆಲೋಚನಾ ಟ್ರೈನು ನಾಮ–ರೂಪಗಳೆಂಬ ಎರಡು ಹಳಿಗಳ ಮೇಲೆ ಓಡುತ್ತದೆ. ಭಕ್ತನ ಮನಸ್ಸು ಭಗವಂತನ ನಾಮಸ್ಮರಣೆ, ರೂಪಸ್ಮರಣೆ, ಲೀಲಾಸ್ಮರಣೆ, ಗುಣಸ್ಮರಣೆ, ಮತ್ತು ವಾಣಿಸ್ಮರಣೆ – ಇವುಗಳಲ್ಲೇ ಮಗ್ನವಾಗಿರುವುದರಿಂದ ಅವನ ಮನಸ್ಸು ಭಗವದರ್ಪಿತವಾಗಿರುತ್ತದೆ. ನಾವೂ ಕೂಡ ಈ ನಾಮ–ರೂಪ ವೃತ್ತಿಗಳನ್ನು ಭಗವನ್ಮಯಗೊಳಿಸಲು ಪ್ರಯತ್ನಿಸಬೇಕು. ಇದೇ ಆಧ್ಯಾತ್ಮಿಕ ಸಾಧನೆ.

ಬುದ್ಧಿಯ ಕೆಲಸ ನಿಶ್ಚಯಿಸುವುದು – **ನಿಶ್ಚಯಾತ್ಮಿಕಾ ಬುದ್ಧಿಃ.** ಯಾವುದು ಧರ್ಮ ಯಾವುದು ಅಧರ್ಮ, ಯಾವುದು ಸರಿ ಯಾವುದು ತಪ್ಪು ಮುಂತಾದವುಗಳನ್ನು ನಿರ್ಣಯಿಸುವ ಅಂತಃಕರಣ ವೃತ್ತಿಯೇ ಬುದ್ಧಿ. ಆದರೆ ಹಲವು ಸನ್ನಿವೇಶಗಳು ಎಷ್ಟು ಸಂಕೀರ್ಣವಾಗಿರುತ್ತವೆ ಎಂದರೆ ಯಾವುದೇ ರೀತಿಯ ನಿರ್ಣಯವೂ ಅಸಾಧ್ಯವಾಗುತ್ತದೆ. **ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ** – ಯಾವುದು ಕರ್ಮ ಯಾವುದು ಅಕರ್ಮ ಎಂಬ ವಿಷಯದಲ್ಲಿ ಜ್ಞಾನಿಗಳೂ ಗೊಂದಲಕ್ಕೊಳಗಾಗುತ್ತಾರೆ, ಎಂದು ಶ್ರೀಕೃಷ್ಣನು ಹೇಳುತ್ತಾನೆ. ಆದರೆ ಭಕ್ತನು ಎಲ್ಲವನ್ನೂ ಭಗವಂತನಿಗೇ ಒಪ್ಪಿಸಿಬಿಡುತ್ತಾನೆ, ಅವನಿಚ್ಛೆಯಂತಾಗಲೆಂದು ಶರಣಾಗುತ್ತಾನೆ. ನಾವೂ ಎಲ್ಲವೂ ಅವನಿಚ್ಛೆ ಎಂದು ಹೇಳುತ್ತೇವೆ, ಆದರೆ ನಮ್ಮಿಚ್ಛೆಯಂತೆ ವರ್ತಿಸುತ್ತೇವೆ. ಭಕ್ತನ ಇಚ್ಛೆ ಭಗವದಿಚ್ಛೆಯೊಡನೆ ಒಂದಾಗಿರುತ್ತದೆ. ತನ್ನ ಯೋಗಕ್ಷೇಮದ ಜವಾಬ್ದಾರಿಯನ್ನು ಭಗವಂತನಿಗೇ ವಹಿಸಿರುತ್ತಾನೆ.

ಗೀತೆಯ ಪ್ರಕಾರ ಎರಡು ಬಗೆಯ ಬುದ್ಧಿಗಳಿವೆ: **ಅವ್ಯವಸಾಯಾತ್ಮಿಕಾ ಬುದ್ಧಿ ಮತ್ತು ವ್ಯವಸಾಯಾತ್ಮಿಕಾ ಬುದ್ಧಿ.** ಆಸೆಗಳಿಗೆ ಬದ್ಧವಾಗಿ, ಆಸೆಗಳನ್ನೇ ಅನುಮೋದಿಸುವ ಇಚ್ಛೆಯನ್ನು **ಅವ್ಯವಸಾಯಾತ್ಮಿಕಾ ಬುದ್ಧಿ** ಎಂದು ಕರೆಯಬಹುದು. ಅನೇಕರಲ್ಲಿ ಪ್ರಬಲವಾದ ಆಸೆಯೇ ಇಚ್ಛೆಯಾಗುತ್ತದೆ. **ವ್ಯವಸಾಯಾತ್ಮಿಕಾ ಬುದ್ಧಿ**ಯು ಅಂತರಾತ್ಮದೊಡನೆ ಸಂಬಂಧಿಸಿರುತ್ತದೆ – ಆತ್ಮದ ಬೆಳಕಿನಿಂದ ಬೆಳಗುತ್ತದೆ. ಇಚ್ಛೆಯನ್ನು ಆಸೆಗಳ ಹಿಡಿತದಿಂದ ಬಿಡಿಸಿದಷ್ಟೂ ಅದು ಅಂತರಾತ್ಮದೊಡನೆ ಹೆಚ್ಚು ನಿಕಟ ಸಂಬಂಧವನ್ನು ಪಡೆಯುತ್ತದೆ. ಆಗ ಅದು ಭಗವದಿಚ್ಛೆಗೆ ಅಧೀನವಾಗುತ್ತದೆ. ಆಸೆಗೆ ಅಧೀನವಾದ ಇಚ್ಛೆಯನ್ನು ಭಗವದಧೀನಗೊಳಿಸುವುದೇ ಆಧ್ಯಾತ್ಮಿಕ ಜೀವನ. ಇಚ್ಛಾಪೂರ್ವಕವಾಗಿ ನಮ್ಮ ಆಸೆಗಳನ್ನು ನಿಗ್ರಹಿಸುವುದರ ಮೂಲಕ ಇಚ್ಛೆಯನ್ನು ಬಲಗೊಳಿಸಬಹುದು. ಆಗ ವ್ಯಕ್ತಿಯು ದೃಢನಿಶ್ಚಯನಾಗುತ್ತಾನೆ. ಇಚ್ಛೆಯನ್ನು ಆಸೆಗಳ ಕಪಿಮುಷ್ಟಿಯಿಂದ ಬಿಡಿಸುವುದು ವೈರಾಗ್ಯ, ಅದನ್ನು ಭಗವದಿಚ್ಛೆಯೊಡನೆ ಒಂದಾಗಿಸುವುದು ಅಭ್ಯಾಸ. ಇವೆರಡರ ಮೂಲಕ ಮನೋಬುದ್ಧಿಗಳನ್ನು ಭಗವಂತನಿಗೆ ಅರ್ಪಿಸಲು ಸಾಧ್ಯ.

### ತಾನೂ ಉದ್ವಿಗ್ನನಾಗದೆ ಇತರರನ್ನೂ ಉದ್ವಿಗ್ನಗೊಳಿಸದವನು :

ಇದು ಭಕ್ತನ ಇನ್ನೊಂದು ಲಕ್ಷಣ. ಅವನು ಭಗವಂತನನ್ನೇ ಗಟ್ಟಿಯಾಗಿ ಹಿಡಿದುಕೊಂಡಿರುವುದರಿಂದ ಇತರರ ಮಾತು ಕೃತಿ ವರ್ತನೆಗಳಿಂದ ಉದ್ವಿಗ್ನನಾಗುವುದಿಲ್ಲ, ಅಂದರೆ ದುಃಖ, ಕೋಪ, ಆತಂಕ, ಚಿಂತೆ ಮುಂತಾದ ಭಾವವಿಕಾರಗಳಿಗೆ ಒಳಗಾಗುವುದಿಲ್ಲ. 'ಇಂತಹ ಅಲ್ಪ ವಿಷಯಗಳಿಗೆ ನಾನೇಕೆ ತಲೆ ಕೆಡಿಸಿಕೊಳ್ಳಬೇಕು?' ಎಂಬ ಧೋರಣೆ ಅವನದಾಗಿರುತ್ತದೆ. ಅವನ ಅಂತರಂಗವು ಸಾರ್ಥಕತೆಯ ಭಾವದಿಂದ ತುಂಬಿಕೊಂಡಿರುತ್ತದೆ. ಆದ್ದರಿಂದ ಅವನು ಇತರರಿಂದ ಏನನ್ನೂ ಅಪೇಕ್ಷಿಸುವುದಿಲ್ಲ, ನಿರೀಕ್ಷಿಸುವುದೂ ಇಲ್ಲ. ನಿರೀಕ್ಷೆ ಇದ್ದು ಅದಕ್ಕನುಗುಣವಾಗಿ ಜನರು ವರ್ತಿಸದಿದ್ದಾಗ ವಿವಿಧ ಭಾವವಿಕಾರಗಳಿಗೆ ಒಳಗಾಗುವುದು ಸ್ವಾಭಾವಿಕ. ಒಬ್ಬ ವ್ಯಕ್ತಿಯಿಂದ ನಾನು ಪ್ರಶಂಸೆಯನ್ನು ನಿರೀಕ್ಷಿಸುತ್ತಿದ್ದು, ಅದರ ಬದಲು ಆತ ನನ್ನನ್ನು ನಿಂದಿಸಿದರೆ ಆಗ ನನ್ನ ಅಂತರಂಗ ಕುದಿಯತೊಡಗುತ್ತದೆ. ಅನಿರೀಕ್ಷಿತವಾಗಿ, ಅನವಶ್ಯಕವಾಗಿ ನಿಂದಿಸಿದರೆ ಮನಸ್ಸಿಗೆ ಅಷ್ಟೊಂದು ಆಘಾತವಾಗುವುದಿಲ್ಲ. ಬದಲು ಆಶ್ಚರ್ಯವಾಗಬಹುದು, ಅಥವಾ ಆ ವ್ಯಕ್ತಿಯ ಬಗ್ಗೆ ಸಹಾನುಭೂತಿ ಉಂಟಾಗಬಹುದು. ನಿರೀಕ್ಷಿಸಿದ ಗೌರವ ನಮಗೆ ದೊರೆಯದಿದ್ದಾಗ ಮನಸ್ಸಿಗೆ ತುಂಬ ಖೇದವಾಗಬಹುದು. ಅಪೇಕ್ಷೆಯೇ ಇಲ್ಲದಿದ್ದಾಗ ಯಾವುದೇ ಬಗೆಯ ಉಪೇಕ್ಷೆಯೂ ನಮ್ಮನ್ನು ಸೋಂಕದು.

ಬುದ್ಧನು ಶಾಂತನಾಗಿ ಕುಳಿತಿದ್ದಾನೆ. ಒಬ್ಬ ವ್ಯಕ್ತಿಯು ಅವನ ಹತ್ತಿರ ಬರುತ್ತಾನೆ. ಅವನ ಮನಸ್ಸು ದುಃಖಿತಪ್ತವಾಗಿದೆ, ತನ್ನ ಮೇಲೆ ಹಿಡಿತವೇ ಇಲ್ಲ. ಬುದ್ಧನ ಶಾಂತ ಮುಖಮಂಡಲ ಅವನ ಮನಸ್ಸನ್ನು ತಣಿಸುವ ಬದಲು ಅವನಲ್ಲಿ ಕೋಪವನ್ನು ಕೆರಳಿಸಿತು. ಅವನು ಬಾಯಿಗೆ ಬಂದಂತೆ ಬುದ್ಧನನ್ನು ಬೈದನು. ಬುದ್ಧನು ಶಾಂತವಾಗಿ ಎಲ್ಲವನ್ನೂ ಕೇಳಿದನು. ಸಾಕಷ್ಟು ಬೈದು ಅವನ ಶಬ್ದ ಭಂಡಾರವೆಲ್ಲ ಮುಗಿದ ಮೇಲೆ ಅಲ್ಲಿಂದ ಹೊರಟುಹೋದನು. ಮನೆಗೆ ಹೋದ ಮೇಲೆ ಅವನಿಗೆ ತಪ್ಪಿನ ಅರಿವಾಗಿ ತುಂಬ ಪಶ್ಚಾತ್ತಾಪದಿಂದ ನೊಂದನು. ಮರುದಿನ ಅವನು ಮತ್ತೆ ಬುದ್ಧನ ಹತ್ತಿರ ಬಂದು ಅವನ ಕ್ಷಮೆಯಾಚಿಸಿದನು. ಬುದ್ಧನು ಅವನನ್ನು ಸಮಾಧಾನ ಮಾಡಿದ ಪರಿ ತುಂಬ ಬೋಧಪ್ರದ : ಈಗ ಬೈದವನೂ ಇಲ್ಲ, ಬೈಸಿಕೊಂಡವನೂ ಇಲ್ಲ, ಎಲ್ಲವೂ ನಿರಂತರ ಬದಲಾಗುತ್ತಿರುವುದರಿಂದ ಈಗ ನೀನು ಮತ್ತು ನಾನು ಇಬ್ಬರೂ ಸಂಪೂರ್ಣ ಬೇರೆಯೇ ವ್ಯಕ್ತಿಗಳು. ಆದ್ದರಿಂದ ಯಾರನ್ನು ಯಾರು ಕ್ಷಮಿಸುವುದು?

ಭಕ್ತನು ಇತರರನ್ನೂ ಉದ್ವೇಗಗೊಳಿಸುವುದಿಲ್ಲ, ಏಕೆಂದರೆ ಅವನು ನಿರಹಂಕಾರಿಯಾಗಿರುತ್ತಾನೆ. ಕೆಲವರ ಅಹಂಕಾರ ಚುಚ್ಚುತ್ತಿರುತ್ತದೆ – ಅವರು ಮುಳ್ಳುಹಂದಿಯಂತೆ. ಅವರ ಮಾತು ಕೃತಿ ವರ್ತನೆ ಎಲ್ಲವೂ ಮೊನಚಾಗಿರುತ್ತದೆ. ಸುತ್ತಲಿರುವವರೆಲ್ಲರೂ ಅವರ 'ಚುಚ್ಚುಮದ್ದಿಗೆ' ಒಳಗಾಗಬೇಕಾಗುತ್ತದೆ. ಕೆಲವರು ನೀತಿ ನಿಷ್ಠರೂ ಕೂಡ ತುಂಬ ನಿಷ್ಠುರವಾಗಿ ವರ್ತಿಸುತ್ತಾರೆ, ಮುಚ್ಚುಮರೆಯಿಲ್ಲದೆ ಮಾತನಾಡುತ್ತ ಇತರರ ಮನಸ್ಸನ್ನು ನೋಯಿಸುತ್ತಾರೆ. ಸಂಸ್ಕೃತ ಸುಭಾಷಿತವೊಂದಿದೆ:

**ರೋಹತೇ ಸಾಯಕೈರ್ವಿದ್ಧಂ ವನಂ ಪರಶುನಾ ಹತಮ್।**
**ವಾಚಾ ದುರುಕ್ತಯಾ ವಿದ್ಧಂ ನ ಸಂರೋಹತಿ ವಾಕ್‌ಕ್ಷತಮ್॥**

ಕತ್ತಿಯಿಂದ ಇರಿದ ಘಾಯ ವಾಸಿಯಾಗುತ್ತದೆ. ಕೊಡಲಿಯಿಂದ ಕಡಿದ ಮರ ಮತ್ತೆ ಚಿಗುರುತ್ತದೆ. ಆದರೆ ಕೆಟ್ಟ ಮಾತಿನಿಂದ ಹೊಡೆದರೆ, ಆ ಮಾತಿನಿಂದಾದ ಘಾಯವು ಎಂದೂ ಗುಣವಾಗುವುದಿಲ್ಲ.

ಶ್ರೀಮಾತೆ ಶಾರದಾದೇವಿಯವರು ಹೇಳುತ್ತಾರೆ: ಇತರರ ಮನ ನೋಯಿಸುವ ಮಾತನ್ನು ಎಂದಾದರೂ ಆಡಬಹುದೆ? ಅಪ್ರಿಯವಾದ ಸತ್ಯವನ್ನು, ಅದು ಸತ್ಯವಾದರೂ, ಹೇಳಬಾರದು. ಏಕೆಂದರೆ ಅದೇ ಒಂದು ಅಭ್ಯಾಸವಾಗಿಬಿಡುತ್ತದೆ. ಕಠೋರವಾಗಿ ಮಾತನಾಡುತ್ತ ಹೋದರೆ ಒಬ್ಬನ ಸ್ವಭಾವವೂ ಕ್ರಮೇಣ ಕಠೋರವಾಗುತ್ತದೆ. ಮಾತಿನ ಮೇಲೆ ನಿಗ್ರಹವಿಲ್ಲದಿದ್ದರೆ ವ್ಯಕ್ತಿಯು ಸೂಕ್ಷ್ಮತೆಯನ್ನು ಕಳೆದುಕೊಳ್ಳುತ್ತಾನೆ. ಇತರರ ಬಗ್ಗೆ ಕಳಕಳಿ ಹೊರಟುಹೋಯಿತೆಂದರೆ ವ್ಯಕ್ತಿಯು ಯಾವುದಕ್ಕೂ ಹಿಂಜರಿಯುವುದಿಲ್ಲ. ಶ್ರೀರಾಮಕೃಷ್ಣರು ಹೇಳುತ್ತಿದ್ದರು: 'ಒಬ್ಬ ಕುಂಟನನ್ನು ಆತನು ಕುಂಟನಾದುದಕ್ಕೆ ಕಾರಣವನ್ನು ಕೇಳಬೇಕಾದರೆ, ನಿನ್ನ ಕಾಲು ಹೀಗೇಕಾಯಿತು ಎಂದು ಮೃದುವಾಗಿ ಕೇಳಬೇಕು.' ಕುಂಟನೆಂದು ಪರಿಗಣಿಸಿದರೆ ಅವನ ಸ್ವಾಭಿಮಾನಕ್ಕೆ ಧಕ್ಕೆಯುಂಟಾಗುತ್ತದೆ.

ಈಗಿನ ಕಾಲದಲ್ಲಿ ಉದ್ವೇಗಸಂಸ್ಕೃತಿಯೇ ಬೆಳೆಯುತ್ತಿದೆ. ಎಲ್ಲೆಲ್ಲಿಯೂ ಉದ್ವೇಗವನ್ನು ಕೆರಳಿಸುವ ರಾಜಕೀಯ ಉಪನ್ಯಾಸಗಳನ್ನು ಕೇಳುತ್ತೇವೆ, ವೃತ್ತಪತ್ರಿಕೆಗಳಲ್ಲಿ ಅಂಥದೇ ಸುದ್ದಿಗಳನ್ನು ಓದುತ್ತೇವೆ. ಈ ರೀತಿ ಉದ್ವೇಗಗಳನ್ನು ಕೆರಳಿಸುವುದರಿಂದ ಕ್ರಮೇಣ ಜನಸಾಮಾನ್ಯರ ಮನಸ್ಸು ದುರ್ಬಲವಾಗುತ್ತದೆ, ಅವರು ಹೆಚ್ಚು ಅನೈತಿಕರಾಗುತ್ತಾರೆ ಮತ್ತು ಇಡೀ ಸಮಾಜ ಭ್ರಷ್ಟವಾಗುತ್ತದೆ. ಜನರ ಮನಸ್ಸನ್ನು ಶಾಂತಿಯಲ್ಲಿ ಇರಿಸುವುದು ಹೇಗೆ ಎಂಬುದರ ಕಡೆಗೆ ನಾವು ಗಮನ ಕೊಡಬೇಕಲ್ಲವೆ?

### ಹರ್ಷಾಮರ್ಷಭಯೋದ್ವೇಗೈಃ ಮುಕ್ತಃ

ಭಕ್ತನು ಹರ್ಷ, ಅಮರ್ಷ ಮತ್ತು ಭಯ – ಈ ಭಾವ ವಿಕಾರಗಳಿಂದ ಮುಕ್ತನಾಗಿರುತ್ತಾನೆ. **ಸ್ವಸ್ಯ ಇಷ್ಟಾರ್ಥಲಾಭೇ ಉತ್ಸಾಹಃ** – ಹರ್ಷವೆಂದರೆ ತಾನು ಇಷ್ಟಪಟ್ಟ ವಸ್ತುವನ್ನು ಪಡೆದಾಗ ಉಂಟಾಗುವ ಉತ್ಸಾಹ ಎಂದು ಶ್ರೀಧರಸ್ವಾಮಿಯವರು ವಿವರಣೆ ನೀಡುತ್ತಾರೆ. **ಪರಸ್ಯ ಲಾಭೇ ಅಸಹನಂ ಅಮರ್ಷಃ** – ಇತರರಿಗೆ ಇಷ್ಟಾರ್ಥ ಲಭಿಸಿದಾಗ ಸಹಿಸಿಕೊಳ್ಳಲಾಗದೇ ಇರುವುದು ಎಂದು ಅಮರ್ಷದ ವಿವರಣೆಯನ್ನು ನೀಡುತ್ತಾರೆ. ಇವು ಸಾಮಾನ್ಯರಿಗೆ ಸ್ವಾಭಾವಿಕವಾದ ಗುಣಗಳು. ಯಾರು ತಾವು ಬಯಸಿದುದನ್ನು ಪಡೆದಾಗ ಅತ್ಯಂತ ಆನಂದ ಪಡುತ್ತಾರೋ ಅವರೇ ಇತರರ ಉನ್ನತಿಯನ್ನು ನೋಡಿ ಅಷ್ಟೇ ಕರುಬುತ್ತಾರೆ. ಸ್ವಾಮಿ ವಿವೇಕಾನಂದರು ಹೇಳುವಂತೆ, ಅಸೂಯೆಯು ಗುಲಾಮತನದ ಲಕ್ಷಣ. ನೂರಾರು ವರ್ಷಗಳ ಪರಕೀಯರ ಆಳ್ವಿಕೆಯಿಂದ ಗುಲಾಮರಾಗಿದ್ದ ಭಾರತೀಯರಿಗೆ ಅಸೂಯೆ ಬಹಳ ಸ್ವಾಭಾವಿಕವಾಗಿಬಿಟ್ಟಿದೆ ಎಂದು ಅವರು ಅಭಿಪ್ರಾಯ ಪಡುತ್ತಾರೆ. ಅಸೂಯೆ ಎಂಬುದು ಕೀಳು ಮನೋಭಾವದ ಲಕ್ಷಣ. ಇಂತಹ ಕೀಳುತನ ತನಗೆ ಸಲ್ಲದು ಎಂದು ದೃಢವಾಗಿ ಮನಸ್ಸಿಗೆ ಹೇಳಿಕೊಳ್ಳಬೇಕು. ಭಕ್ತನು ಭಗವದಾನಂದದಿಂದ ತುಂಬಿರುತ್ತಾನೆ, ತಾನಿನ್ನೇನೂ ಪಡೆಯಬೇಕಾದುದು ಇರುವುದಿಲ್ಲ. ಬೇರೆಯವರು ಇನ್ನೇನು ಪಡೆದಿದ್ದರೂ ಅದು ಭಗವದ್‌ವಸ್ತುವಿಗಿಂತ ದೊಡ್ಡದಾಗಿರಲು, ಶ್ರೇಷ್ಠವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಅವನ ಮನಸ್ಸಿನಲ್ಲಿ ಅಸೂಯೆಗೆ ಎಡೆಯೇ ಇರುವುದಿಲ್ಲ.

ಅಸೂಯೆ ಮನುಷ್ಯನನ್ನು ತುಂಬ ಕೆಳಮಟ್ಟಕ್ಕೆ ಇಳಿಸಿಬಿಡುತ್ತದೆ. ಇಬ್ಬರು ಪರಸ್ಪರ ಶತ್ರುಗಳು ಇರುತ್ತಾರೆ. ಇಬ್ಬರೂ ಇನ್ನೊಬ್ಬನಿಗಿಂತ ಮೇಲಾಗಬೇಕೆಂದು ಪೈಪೋಟಿಯಲ್ಲಿರುತ್ತಾರೆ. ಇಬ್ಬರೂ ಪ್ರತ್ಯೇಕವಾಗಿ ತಪಸ್ಸು ಮಾಡುತ್ತಾರೆ. ಭಗವಂತನು ಅವರ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗುತ್ತಾನೆ. ಅವರಲ್ಲಿ ಒಬ್ಬನ ಮುಂದೆ ಭಗವಂತನು ಬಂದು ನಿಂತು, ಏನು ವರ ಬೇಕೆಂದು ಕೇಳುತ್ತಾನೆ. ಇನ್ನೊಬ್ಬನು ತನಗಿಂತ ಮೇಲಾದ ವರವನ್ನು ಕೇಳಿಬಿಟ್ಟರೆ ಏನು ಗತಿ ಎಂದು ಅವನಿಗೆ ಹೊಳೆಯುತ್ತದೆ. ಆಗ ಅವನು ತನ್ನ ಜಾಣತನವನ್ನು ಉಪಯೋಗಿಸಿ ಭಗವಂತನಿಗೆ ಹೇಳುತ್ತಾನೆ: 'ಹೇ ದೇವರೆ, ನಾನೂ

ಬ್ಬನೇ ಹೇಗೆ ವರವನ್ನು ಕೇಳಲಿ. ಅಲ್ಲಿ ನನ್ನ ಪರಮ ಮಿತ್ರನು ತಪಸ್ಸು ಮಾಡುತ್ತಿದ್ದಾನೆ. ಮೊದಲು ಅವನ ಆಸೆಯನ್ನು ಪೂರ್ತಿಗೊಳಿಸು. ಅವನು ಏನು ಕೇಳುತ್ತಾನೊ ಅದರ ಎರಡರಷ್ಟನ್ನು ನನಗೆ ದಯಪಾಲಿಸಿದರೆ ಸಾಕು.' ಭಗವಂತನು ಇನ್ನೊಬ್ಬನ ಹತ್ತಿರ ಹೋಗುತ್ತಾನೆ. ಅವನಿಗೂ ಅದೇ ಗೊಂದಲ. ಹಿಂದಿನವನು ಏನು ವರ ಬೇಡಿದನೆಂದು ಅವನು ಭಗವಂತನನ್ನೇ ಕೇಳುತ್ತಾನೆ. ಭಗವಂತನು ಹಿಂದಿನವನು ಹೇಳಿದ ವಿಷಯವನ್ನು ತಿಳಿಸುತ್ತಾನೆ. ಈಗ ಈತನು ಬಹಳವಾಗಿ ಆಲೋಚಿಸಿ ಒಂದು ಶ್ರೇಷ್ಠವಾದ ವರವನ್ನು ಕೇಳುತ್ತಾನೆ: 'ಹೇ ಭಗವಂತ, ಅನಾಥ ರಕ್ಷಕ, ನನಗಿನ್ನೇನೂ ಬೇಡ ತಂದೆ. ನಿನ್ನ ದರ್ಶನವಾದ ಮೇಲೆ ನನಗಿನ್ನೇನು ಬೇಕು? ನನ್ನ ಒಂದು ಕಣ್ಣು ಹೊರಟು ಹೋಗಲಿ, ಅಷ್ಟೇ ಸಾಕು.' ಇವನ ಒಂದು ಕಣ್ಣು ಹೋದರೆ ಇನ್ನೊಬ್ಬನ ಎರಡೂ ಕಣ್ಣು ಹೋದಂತಾಯಿತು.

ತಾಯಿ ಎಷ್ಟೇ ದುರ್ಬಲಳಾಗಿದ್ದರೂ ಮಗುವಿಗೆ ಅವಳೊಡನಿರುವಾಗ ನಿರ್ಭಯ. ಹಾಗೆಯೇ ಅಭಯ ಸ್ವರೂಪನಾದ ಭಗವಂತನೊಡನೆ ಇರುವ ಭಕ್ತನಿಗೆ ಯಾವ ಭಯವೂ, ಯಾರ ಭಯವೂ ಇರುವುದಿಲ್ಲ. ಎರಡು ಬಗೆಯ ಭಯಗಳಿರುತ್ತವೆ: ತಾನು ಇಷ್ಟಪಟ್ಟು ಇಟ್ಟುಕೊಂಡದ್ದನ್ನು ಕಳೆದುಕೊಳ್ಳುವ ಭಯ ಮತ್ತು ತನಗಿಷ್ಟವಿಲ್ಲದುದು ಪ್ರಾಪ್ತಿಯಾಗುವ ಭಯ. ಭಗವಂತನನ್ನು ಕಳೆದುಕೊಳ್ಳಲಾಗದೆ ಇರುವುದರಿಂದ ಭಕ್ತನಿಗೆ ಕಳೆದುಕೊಳ್ಳುವುದರ ಭಯವಿಲ್ಲ. ತಾನು ಇಷ್ಟಪಡದಿರುವುದು ಯಾವುದೂ ಇಲ್ಲದಿರುವುದರಿಂದ ಪ್ರಾಪ್ತಿಯ ಭಯವೂ ಇಲ್ಲ.

ಭಯಕ್ಕೆ ಸಂಬಂಧಿಸಿದಂತೆ ಇನ್ನೊಂದು ಗುಣವಿದೆ – ಆತಂಕ ಅಥವಾ ಕಾತರತೆ (anxiety). ಈ ಆತಂಕವು ಭವಿಷ್ಯಕ್ಕೆ ಸಂಬಂಧಿಸಿದುದು – ಮುಂದೆ ಏನಾಗುತ್ತೊ ಎಂಬ ಆತಂಕ. ಮುಂದೆ ಏನೋ ಕಾಯಿಲೆ ಬರಬಹುದು, ವ್ಯಾಪಾರ ಕುಸಿಯಬಹುದು, ಏನೋ ಅನಾಹುತವಾಗಬಹುದು, ತನ್ನ ಕ್ಷೇಮಕ್ಕೆ ಧಕ್ಕೆ ಉಂಟಾಗಬಹುದು – ಹೀಗೆ ಅನೇಕ ಬಗೆಯ ಆತಂಕಗಳಿಂದ ಅನೇಕರು ತೊಳಲುತ್ತಾರೆ. ಬರುವ ದುಃಸ್ಥಿತಿಯನ್ನು ಚಿಂತಿಸುತ್ತ, ಇರುವ ಸುಸ್ಥಿತಿಯನ್ನೂ ಅವರು ಅನುಭವಿಸಲಾರರು. ಈ ಆತಂಕವು ತೀವ್ರವಾದಾಗ ಅದು ದೈಹಿಕ ಆರೋಗ್ಯವನ್ನು ಕೆಡಿಸುವುದು ಮಾತ್ರವಲ್ಲದೆ, ಪರಸ್ಪರ ಮಾನವೀಯ ಸಂಬಂಧವನ್ನೂ ಕೆಡಿಸುತ್ತದೆ. ತೀವ್ರ ಆತಂಕಕ್ಕೊಳಗಾದ ವ್ಯಕ್ತಿಯು ಸುತ್ತಲಿನ ನೆಮ್ಮದಿಯ ವಾತಾವರಣವನ್ನೂ ಕೆಡಿಸುತ್ತಾನೆ. ಆದರೆ ಭಗವದಾದರ್ಶವನ್ನು ಹೊಂದಿರುವ, ಭಗವಂತನನ್ನೇ ಆಶ್ರಯಿಸಿರುವ ವ್ಯಕ್ತಿಯು ಯಾವ ಆತಂಕಕ್ಕೂ ಒಳಗಾಗುವುದಿಲ್ಲ; ಭಗವದಾದರ್ಶದ ಭದ್ರಕೋಟೆಯ ಒಳಗೆ ನಿರಾತಂಕನಾಗಿರುತ್ತಾನೆ. ಆತಂಕಗಳೇ ಅಂತಕನ ದೂತರು. ಅವು ನಮ್ಮ ಅಂತಃಸತ್ವವನ್ನೆಲ್ಲ ಹೀರುತ್ತವೆ – ಕಬ್ಬಿನ ರಸವನ್ನೆಲ್ಲ ಹೀರಿ ಬಿಸಾಕುವಂತೆ.

*(ಮುಂದುವರಿಯುವುದು)* ❖



# ಶತಾನಂದ

**ಸ್ವಾಮಿ ರಾಘವೇಶಾನಂದ**

**ರಾಮಾಯಣದಲ್ಲಿ ಬರುವ ಅಹಲ್ಯೆಯ ಕಥೆಗೆ ಎಷ್ಟೆಷ್ಟು ಬೇರೆ ಆಯಾಮ, ಉಪಕಥೆಗಳಿವೆಯೊ! ತುಳಸೀರಾಮಾಯಣದಲ್ಲಿ ಬರುವ, ಅಹಲ್ಯೆಯ ಮಗ ಶತಾನಂದನ ಮೂಲಕ ನಿರೂಪಿತವಾಗಿರುವ ಈ ಕಥೆಯನ್ನು ಸುಲಲಿತವಾಗಿ ರಚಿಸಿರುವ ಲೇಖಕರು ಉತ್ತಮ ವಾಗ್ಮಿಗಳೂ, ಬರಹಗಾರರೂ ಆಗಿದ್ದಾರೆ. ಅವರ ಅನೇಕ ಮಕ್ಕಳ ಸಾಹಿತ್ಯ ರಚನೆಗಳು ಅತ್ಯಂತ ಜನಪ್ರಿಯವಾಗಿದ್ದು, ಪ್ರಸ್ತುತ ಅವರು ಉದಕಮಂಡಲ ರಾಮಕೃಷ್ಣ ಮಠದ ಅಧ್ಯಕ್ಷರಾಗಿದ್ದಾರೆ.**

ಭಗವಂತನಾಡಿದ ರಾಮಾಯಣದ ನಾಟಕದಲ್ಲಿ ಶತಾನಂದನದೂ ಒಂದು ಪಾತ್ರ. ಅಹಲ್ಯಾ-ಗೌತಮರ ಜ್ಯೇಷ್ಠ ಪುತ್ರ ಶತಾನಂದ. ಇಂದು ಮಿಥಿಲೆಯ ರಾಜ ಜನಕನ ರಾಜಪುರೋಹಿತ. ಆದರೆ ಅವನು ಬಾಲಕನಾಗಿದ್ದಾಗ ನಡೆದ ಘೋರ ಘಟನೆ ಹಗಲೂ ಇರುಳು ಅವನ ಮನಸ್ಸಿನಲ್ಲಿ ಕಾಡುತ್ತಿತ್ತು. ಕಲ್ಲಿನ ರೂಪದಲ್ಲಿ ಕುಳಿತಿದ್ದ ತಾಯಿಯ ಚಿತ್ರ ಧಾರೆಧಾರೆಯಾಗಿ ಕಣ್ಣಿನಲ್ಲಿ ನೀರು ತರುತ್ತಿತ್ತು. ಅಂದು ನಡೆದ ಘಟನೆ ಮತ್ತೆ ಚಿತ್ರದಂತೆ ಮನಸ್ಸಿನ ಮುಂದೆ ಬಂದಿತು: ಕಟ್ಟೆಯಲ್ಲೇ ಕುಳಿತು ತಾನು ನೋಡಿದ ನೋಟ ಒಂದೇ.. ಅಮ್ಮ ಅಹಲ್ಯೆ ತಂದೆ ಗೌತಮನ ಪಾದದ ಬಳಿ ಮುದ್ದೆಯಾಗಿ ಬಿದ್ದು ಗೋಳಿಡುತ್ತಿದ್ದಾಳೆ. ಹತ್ತಿರ ನಿಂತಿದ್ದಾನೆ ಧೂರ್ತ ಇಂದ್ರ.. ತಂದೆ ದುಃಖದಿಂದ ಸಿಟ್ಟಿನಿಂದ ಕೈಯಲ್ಲಿ ಕಮಂಡಲದ ನೀರೆತ್ತಿ ಘೋಷಿಸುತ್ತಿದ್ದಾರೆ. ಎಂದಿನಂತಿಲ್ಲ ವಾತಾವರಣ. ಒಳಗೆ ಹೋಗಲೆ? ಭಯವಾಗಿ ಸುಮ್ಮನೆ ಆಲದ ಮರದ ಕೆಳಗಿನ ಕಟ್ಟೆಯ ಮೇಲೆ ಕುಳಿತಿದ್ದೆ. ಪರ್ಣಕುಟಿಯಿಂದ ಅಮ್ಮನ ಅಳು, ತಂದೆಯ ಕೋಪದ ಮಾತು ಕೇಳುತ್ತಿತ್ತು. ಎಂದೂ ಅಪ್ಪ ಅಷ್ಟು ಕೋಪಗೊಂಡವರಲ್ಲ, ಯಜ್ಞದ ವ್ಯವಸ್ಥೆಯಲ್ಲಿ ಅಮ್ಮ ಏನಾದರೂ ತಪ್ಪು ಮಾಡಿದಳೇ? ಅದಕ್ಕೆ ಇಷ್ಟು ಕೋಪವೇ? ಅಪ್ಪ ಅವಳಿಗೆ ಮನೆ ಬಿಟ್ಟು ಹೋಗುವಂತೆ ಆಜ್ಞಾಪಿಸಿದ್ದಾರೆಯೇ? ಹಾಗಾಗಿದ್ದರೂ ಇಷ್ಟು ಅವಾಂತರವಾಗುವುದಿಲ್ಲವಲ್ಲ. ಅಕ್ಕ ಪಕ್ಕದ ಹಿರಿಯ ಋಷಿಗಳು ನಿಧಾನವಾಗಿ ಸಮಾಧಾನ ಮಾಡುವರಲ್ಲಾ! ತಾಯಿ ಅಹಲ್ಯೆ ತಂದೆಯ ಪಾದದ ಬಳಿ ಬಿದ್ದು ಗೋಳಾಡುತ್ತಿದ್ದಾಳೆ. ಶಪಿಸಲು ಸಿದ್ಧರಾಗಿ ತಂದೆ ಕೈಯಲ್ಲಿ ಕಮಂಡಲು ಹಿಡಿದು ನಿಂತಿದ್ದಾರೆ. ಇನ್ನೊಬ್ಬ ತಂದೆಯಂತೆಯೇ ವೇಷ ತೊಟ್ಟ ಮಹಾಪುರುಷಾಕಾರವೊಂದು ತಲೆ ತಗ್ಗಿಸಿ ಬಾಗಿಲ ಬಳಿಯಲ್ಲಿ ನಿಂತಿದೆ. ಇವನೆಲ್ಲಿಂದ ಬಂದ? ತನ್ನ ತಂದೆ ದ್ವಿರೂಪ ತಾಳಿದ್ದಾರೆಯೇ? ಹುಡುಗನಾದ ಶತಾನಂದನಿಗೆ ಏನೂ ಅರ್ಥವಾಗಲಿಲ್ಲ. ನೋಡುತ್ತಿದ್ದಂತೆಯೇ ತಂದೆ ಕಮಂಡಲುವಿನಿಂದ ನೀರು ತೆಗೆದು ಕೈಯಲ್ಲಿ ಸುರುವಿ ಕೊಂಡು, ''ಇಂದ್ರಾ'' ಎಂದು ಅಬ್ಬರಿಸಿದರು. ಆಗ ಗೊತ್ತಾಯಿತು, ಬಾಗಿಲ ಬಳಿ ತಂದೆಯ ರೂಪದಲ್ಲೇ ನಿಂತಿದ್ದ ವ್ಯಕ್ತಿ ಇಂದ್ರ ಎಂದು. ತಂದೆ ಮುಂದುವರೆಸಿದರು, ''ಹೇ ಮಾಯಾವಿ ಇಂದ್ರ, ನಾನಿಲ್ಲದಾಗ ಬಂದು ಮೋಸದಿಂದ ನನ್ನ ಮಡದಿಯನ್ನು ರಮಿಸಿ ಕೂಡಿದೆಯಲ್ಲ, ಈ ಮೋಸಕ್ಕೆ ಪ್ರತಿಯಾಗಿ ನಿನ್ನ ಪುರುಷತ್ವ ನಾಶವಾಗಲಿ..'' ಎಂದು ಶಾಪ ಕೊಟ್ಟರು. 'ಸರಿಯಾಗಿ ಮಾಡಿದಿರಿ ಗುರುಗಳೆ', ಎಂದು ಹೊರಗಿದ್ದ ಎಲ್ಲರೂ ಕೂಗಿದರು. ಅಷ್ಟಕ್ಕೇ ಕಥೆ ಮುಗಿದಿದ್ದರೆ ಚೆನ್ನಾಗಿರುತ್ತಿತ್ತು. ಯಾರೂ ಮುಂದೆ ಬೆಚ್ಚುತ್ತಿರಲಿಲ್ಲ, ನಾನು ನಡುಗುತ್ತಲೂ ಇರಲಿಲ್ಲ, ದುಃಖಿಸುತ್ತಲೂ ಇರಲಿಲ್ಲ. ಮತ್ತೊಮ್ಮೆ ಕಮಂಡಲದ ನೀರು ಕೈಗೆ ಬಂದಿತು. ಭೂಮಿ, ಆಕಾಶಗಳೆಲ್ಲಾ ಗಾಬರಿಗೊಳ್ಳುವಂತೆ ಶಪಿಸಿದರು ನನ್ನ ತಾಯಿ ಅಹಲ್ಯೆಯನ್ನು:

**ವಾತ ಭಕ್ಷಾ ನಿರಾಹಾರಾ ತಪ್ಸಂಕೀ ಭಸ್ಮಶಾಯಿನೀ**
**ಅದೃಶ್ಯಾ ಸರ್ವಭೂತಾನಾಮಾಶ್ರಮೇಸ್ಮಿನ್ ವಸಿಷ್ಯಸಿ ॥**

'ಆಹಾರವಿಲ್ಲದೆ, ಬರೀ ಗಾಳಿಯನ್ನೇ ನುಂಗಿ ಪಶ್ಚಾತ್ತಾಪದ ಪ್ರಾಯಶ್ಚಿತ್ತ ಬೂದಿಯಲ್ಲಿ, ಲೋಕದ ಜೀವ ಜಗತ್ತಿನ ಕಣ್ಣಿಗೂ ಬೀಳದೆ ಜೀವ ಸವೆಸು.'

ಅದನ್ನು ಕೇಳಿದ ಋಷಿಗಳೆಲ್ಲಾ ಹೌಹಾರಿದರು. ಇದು ಕಠೋರ ಶಿಕ್ಷೆ ಎಂದರು. ಗೌತಮರು ಅಂತಹ ರೌದ್ರಾವತಾರವನ್ನು ತಾಳಿದ್ದು ಎಂದೂ ಕಂಡಿರಲಿಲ್ಲ. ನಿಧಾನವಾಗಿ ಅವರ ಕೋಪ ತಣಿಯಿತು. ಆದರೆ ಪಶ್ಚಾತ್ತಾಪವಿರಲಿಲ್ಲ, ಕರುಣೆಯ ಹನಿ ಮುಖದ ಮೇಲಿತ್ತು. ಶಾಪಕ್ಕೆ ವಿಶಾಪಕೊಟ್ಟರು, ''ನೀನು ಪಶ್ಚಾತ್ತಾಪದ ಅಗ್ನಿಯಲ್ಲಿ ಬೆಂದ ಮೇಲೆ ದಶರಥಾತ್ಮಜನಾದ ಶ್ರೀರಾಮ ಬರುತ್ತಾನೆ. ಆಗ ನಿನ್ನ ಪಾಪ ಕಳೆದು, ಕಾಮಮೋಹಗಳನ್ನು ಕಳೆದುಕೊಂಡು ನನ್ನೆಡೆಗೆ ಬರುತ್ತೀಯೆ'' ಎಂದು ನುಡಿದರು.

ನಿಧಾನವಾಗಿ ಗೌತಮರು ಹೊರಬಂದರು; ಶತಾನಂದ ಭಾರವಾದ ಹೆಜ್ಜೆಯಿಂದ ತಾಯಿ ಅಹಲ್ಯೆಯನ್ನು ಸಮಾಧಾನಗೊಳಿಸಲೆಂದು ಕುಟೀರದತ್ತ ಹೆಜ್ಜೆಯಿಟ್ಟ. ಎಲ್ಲಿದ್ದಳು ತಾಯಿ? ಅವಳಿದ್ದೆಡೆ ಭಾರವಾದ ಕಲ್ಲಿನ ಶಿಲೆಯಿತ್ತು. ಶತಾನಂದ ಇವಳ ಮುಂದಿನ ಬಾಳನ್ನು ನೆನೆದ. ಏಕಾಂಗಿಯಾಗಿ, ಪಶ್ಚಾತ್ತಾಪದ ಅಗ್ನಿಯಲ್ಲಿ ದಹಿ

ಸುತ್ತಾ, ಪಾಯಶ್ಚಿತ್ತ ಭಸ್ಮಶಾಯಿಯಾಗಿ ಕೂಳಿಲ್ಲದೆ, ನೀರಿಲ್ಲದೆ, ಭಾವವಿಲ್ಲದೆ, ಜೀವವಿಲ್ಲದೆ ಶ್ರೀರಾಮನ ಆಗಮನವನ್ನು ಕಾಯುತ್ತಾ ಕಾಲ ಕಳೆಯಬೇಕಷ್ಟೇ. ಇಂದೋ ನಾಳೆಯೋ, ನೂರಾರು ವರ್ಷ ಗಳ ನಂತರವೋ ಯಾರಿಗೆ ಗೊತ್ತು?

ಮತ್ತೆ ಮರದ ಕೆಳಗೆ ಕುಳಿತ ಶತಾನಂದ, ತಪಸ್ವಿ, ನ್ಯಾಯಾ ನ್ಯಾಯಗಳ ಬಗ್ಗೆ ಯೋಚಿಸಲಾರಂಭಿಸಿದ. ತನ್ನ ಆಧ್ಯಾತ್ಮಿಕ ದೃಷ್ಟಿ ಯಿಂದ ನಡೆದ ಘಟನೆಗಳನ್ನೆಲ್ಲಾ ಅಳೆದು ಸುರಿದು ನೋಡಿದಾಗ ತಪ್ಪು ಅಹಲ್ಯೆಯದೇ ಎನಿಸಿತು. ತಂದೆ ಕೋಪದಿಂದ ಶಪಿಸಿದ್ದರೂ ಅದರಲ್ಲಿ ವಿಚಾರವಿತ್ತು, ನ್ಯಾಯವಿತ್ತು ಎನಿಸಿತು. ಇಂದ್ರ ಮೋಸ ದಿಂದ ಗೌತಮರ ರೂಪದಲ್ಲೇ ಬಂದಿದ್ದರೂ ಅದು ಕಾಮದ ವೇಳೆಯೆ? ನಿತ್ಯಾಗ್ನಿ ಕಾರ್ಯ ನಡೆಯುತ್ತಿದೆ. ವೇದಾಂತ ಚಿಂತನ ಮಂಥನ ನಡೆಯುತ್ತಿದೆ. ಯುಕ್ತವಾದ ಆಹಾರ ವಿಹಾರಗಳಿಂದ ಕೂಡಿದ ಸಂಯಮಶೀಲಕವಾದ ಪರಿಸರದಲ್ಲಿ ಗೌತಮರ ಮನದಲ್ಲಿ ಕಾಮ ಮೂಡಿದ್ದರೂ, ಗುರುಪತ್ನಿಯೆಂದು ಆಶ್ರಮವಾಸಿಗಳಿಂದ ಗೌರವಾನ್ವಿತಳಾದ ಅಮ್ಮ, ಗೌತಮ ರೂಪದಲ್ಲಿದ್ದ ಇಂದ್ರನನ್ನು, 'ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳಿ' ಎಂದು ಎಚ್ಚರಿಸಬೇಕಿತ್ತು. ಇನ್ನೂ ಮುಂದುವರಿದಿದ್ದಲ್ಲಿ ತನ್ನ ತಪೋಬಲದಿಂದ ಶಪಿಸಬೇಕಿತ್ತು. ಸಂಸಾರ ಸುಖದ ಮುಖ್ಯ ಉದ್ದೇಶ ಪುತ್ರ ಸಂತಾನ. ಅದೂ ಲಭಿಸಿ, ಅದರ ಚಿಹ್ನೆಯಾಗಿ ನನ್ನ ಜನ್ಮವಾಗಿತ್ತಲ್ಲ, ತಾಯಿ ಹೆಜ್ಜೆ ತಪ್ಪಿದಳು ಎನಿಸಿತು. ಅಂಥ ತಾಯಿಯ ಮಗನಾಗಿ ನಾನೂ ತಲೆ ತಗ್ಗಿಸು ವಂತಾಯಿತಲ್ಲ. ಇವನ ವಿಚಾರ ಲಹರಿ ಹೀಗೆ ಹರಿದು, ಅವನ ವೈರಾಗ್ಯ ಆ ಆಶ್ರಮವನ್ನೇ ಬಿಟ್ಟು ದೂರ ಕಾಡಿನಲ್ಲಿ ತಪಸ್ಸಿನಲ್ಲಿ ತೊಡಗುವಂತೆ ಮಾಡಿತು. ನಂತರ ಬಹಳ ವರ್ಷ ಕಳೆಯಿತು. ತಾನು ಪ್ರಬುದ್ಧನಾಗಿ ಜನಕನ ಪುರೋಹಿತನಾಗಿದ್ದೇನೆ. ನನ್ನ ಮಾತು ಈಗ ಎಲ್ಲರಿಗೂ ವೇದವಾಕ್ಯ. ಎಲ್ಲ ಮಂಗಳಕಾರ್ಯ ಗಳಿಗೂ ನಾನು 'ಅಸ್ತು' ಎನಬೇಕು. ಆದರೆ ಅಂತರಾಳದಲ್ಲಿ ಏನೋ ಕೊರತೆ. ಅಪ್ರ ಬುದ್ಧ ಬಾಲಕನಾಗಿದ್ದಾಗ ನನ್ನ ನಿರ್ಣಯ ಸರಿಯಾಗಿತ್ತೆ? ತಾಯಿ ಯನ್ನು ನಿರ್ಲಕ್ಷಿಸಿ ನಾನು ನಿಷ್ಠುರನಾಗಿ ಹೊರಹೋದದ್ದು ಸರಿಯೆ? ನನ್ನ ತಂದೆ ಶಾಪಕೊಟ್ಟರೂ ಅದರ ಬೆನ್ನಿಗೇ ಅದಕ್ಕೆ ಪರಿ ಹಾರವನ್ನು ಸೂಚಿಸಿದರು. ಆದರೆ ನಾನೇನು ಮಾಡಿದೆ? ಸರ್ವಜ್ಞ ನಂತೆ ವರ್ತಿಸಿದೆನಲ್ಲಾ! ಎಲ್ಲರೂ ಕೈ ಬಿಟ್ಟಾಗ ನಾನು ತಾಯಿಗೆ ಆಸರೆ ಯಾಗಿರಬೇಕಿತ್ತಲ್ಲವೆ? ಬಹಳ ವರ್ಷಗಳ ನಂತರ ಜ್ಞಾನ ಬಂದಾಗ ಪ್ರಾಯಶ್ಚಿತ್ತ ಮಾಡಿಕೊಳ್ಳೋಣವೆಂದು ಮತ್ತೆ ಆಶ್ರಮಕ್ಕೆ ಓಡಿದೆ. ಆದರೆ ಅಲ್ಲಿದ್ದುದೇನು? ಕಲ್ಲುಬಂಡೆ. ಹೌದು, ಗೌತಮರ ಪತ್ನಿ, ಶತಾನಂದನ ತಾಯಿ ಅಹಲ್ಯೆ ಕಲ್ಲಾಗಿದ್ದಳು. ಅವಳ ಅಂದುಗೆಯ ಕಿಂಕಿಣಿಯಿಲ್ಲ, ಬಳೆಗಳ ಝುಣಝುಣವಿಲ್ಲ, ಅವಳು ಗುನುಗಿಕೊಳ್ಳು ತ್ತಿದ್ದ ಮಂತ್ರಗಳ ಸದ್ದಿಲ್ಲ, ಯಜ್ಞಕುಂಡದ ಅಗ್ನಿಯಲ್ಲಿ ಯಜ್ಞ ಮಾಡಲು ಋಷಿಮುನಿಗಳಿಲ್ಲ, ತಂದೆ ಗೌತಮರು ಯಾವುದೋ ಕಾಡಿನಲ್ಲಿ ತಪೋಮಗ್ನರು. ತಮ್ಮ ಅಹಲ್ಯೆಯನ್ನು ಮತ್ತೆ ಸ್ತ್ರೀರೂಪ ದಲ್ಲಿ ಕಾಣಲು ಶ್ರೀರಾಮನ ನಿರೀಕ್ಷೆಯಲ್ಲಿದ್ದಾರೆಯೆ? ನಿರಾಶೆ ಯಿಂದ ಮರಳಿದೆ. ಈಗ ಮಿಥಿಲೆಯ ರಾಜ ಪುರೋಹಿತ ನಾಗಿಯೂ, ಸಕಲ ರಾಜಮರ್ಯಾದೆ ಪಡೆದೂ ತನ್ನ ಅಂತರಾತ್ಮಕ್ಕೆ ಹಿಗ್ಗಿಲ್ಲ, ಸುಖವಿಲ್ಲ. ಒಂದು ರಾತ್ರಿ ಕನಸಿನಲ್ಲಿ ಜಮದಗ್ನಿ, ಪರಶು ರಾಮರನ್ನು ಕಂಡೆ. 'ತಾಯಿಯ ತಲೆ ಕಡಿ' ಎಂದಾಕ್ಷಣ ತಲೆ ಕಡಿದರೂ, ಮತ್ತೆ ವರ ಕೇಳೆಂದಾಗ 'ತಾಯಿಯ ಜೀವ ಬೇಕು' ಎಂದು ಕೇಳಿದ ಪರಶುರಾಮ ತನ್ನ ಮಾತೃಋಣ ತೀರಿಸಿಕೊಂಡ. ಆದರೆ ನಾನೋ! ಈಗ ಒಂದೇ ಆಸೆ ಉಳಿದಿದ್ದು – ಶ್ರೀರಾಮ ಬಂದಾನೆ? ನನ್ನ ತಾಯಿಗೆ ಮತ್ತೆ ಜೀವ ತುಂಬಿಯಾನೆ?

ಹೀಗೆ ದಿನ ಕಳೆಯುತ್ತಿದ್ದಾಗ ಒಂದು ಸುದಿನ ಬಂದಿತ್ತು. ಮಿಥಿ ಲೆಯ ರಾಜ ಜನಕ ದೊಡ್ಡದೊಂದು ಯಜ್ಞ ಕೈಗೊಂಡ. ಯಜ್ಞಶಾಲೆ ಯಲ್ಲಿ ನನಗೆ ಬಿಡುವಿಲ್ಲದ ಕೆಲಸ. ದೇಶದ ಮೂಲೆ ಮೂಲೆ ಗಳಿಂದ ಋಷಿಮುನಿಗಳು ಆಗಮಿಸುತ್ತಿದ್ದಾರೆ. ಬರುವವರ ಕುಲ ಗೋತ್ರಗಳ ನ್ನೆಲ್ಲಾ ಶತಾನಂದರಿಗೆ ತಿಳಿಸುತ್ತಿದ್ದಾರೆ. ಋಷಿವರೇಣ್ಯ ವಿಶ್ವಾಮಿತ್ರರೂ ಬರುತ್ತಿದ್ದಾರೆ. ಈ ಮಾತು ಕೇಳಿದ ತಕ್ಷಣ ಶತಾನಂದನ ಕಿವಿ ನೆಟ್ಟ ಗಾಯಿತು. ಕೆಲವು ತಿಂಗಳ ಹಿಂದೆಯಷ್ಟೇ ಕೇಳಿದ್ದ, ಮಹಾಮುನಿ ವಿಶ್ವಾಮಿತ್ರರು ದಶರಥನ ಮಗ ಶ್ರೀರಾಮನನ್ನು ಅಯೋಧ್ಯೆಯಿಂದ ತಮ್ಮ ವನಕ್ಕೆ ಯಜ್ಞರಕ್ಷಣೆಗೆ ಕರೆದೊಯ್ದಿದ್ದಾ ರೆಂದು. ಅಂದು ಶತಾ ನಂದ ಯಜ್ಞಕ್ಕೆ ವಿಶೇಷ ಆಹುತಿಯನ್ನು ಕೊಟ್ಟು ಶ್ರೀರಾಮನ ರಕ್ಷಣೆ ಗಾಗಿ ಎಲ್ಲಾ ದೇವತೆಗಳನ್ನೂ ಉಪಾಸಿಸಿದ್ದ. ಸ್ವಾರ್ಥಕ್ಕಾಗಿಯೆ? ಶತಾ ನಂದನಿಗೆ ಗೊತ್ತು, ತನ್ನ ಅಮ್ಮನ ಮೇಲೆ ವಿಶ್ವಾಮಿತ್ರರಿಗೆ ತುಂಬಾ ಅನುಕಂಪ. ಜೀವ ಜಗತ್ತಿನ ಕಣ್ಣಿನಿಂದ ದೂರಾಗಿ.. ಭಾವಜಗತ್ತಿನ ಹೊರತಾಗಿ... ಕಲ್ಲಾಗಿ ಬದುಕು ನಡೆಸುತ್ತಿದ್ದಾಳೆ ತನ್ನಮ್ಮ ಅಹಲ್ಯೆ.. ಆರ್ತರಿಗೆ ಸದಾ ಮರುಗುವ ವಿಶ್ವಾಮಿತ್ರರ ಕಿವಿಗೆ ನನ್ನ ತಾಯಿಯ ಆರ್ತನಾದ ಬಂಡೆಯನ್ನು ಭೇದಿಸಿಕೊಂಡು ಬಂದು ಕೇಳಿರುತ್ತದೆ. ವಿಶ್ವಾಮಿತ್ರರನ್ನು ಭೇಟಿ ಮಾಡಲು ಚಡಪಡಿಸಿತು ಶತಾನಂದನ ಮನಸ್ಸು. ಅವರ ಚಡಪಡಿಕೆಯನ್ನು ಕಂಡು ಜೊತೆಗಿದ್ದ ಪುರೋ ಹಿತರು ಕೇಳಿದರು – ''ಇಂದೇನು ಶತಾನಂದರು ಎಂದಿನಂತಿಲ್ಲ? ಯಾಕೆ ಈ ಕಾತರ? ಯಾರ ನಿರೀಕ್ಷೆ? ಏನು ಕಾರಣ?''

ಮಹಾರಾಜ ಜನಕನ ಕರೆ ಬಂದಿತು. ವಿಶ್ವಾಮಿತ್ರನ ಸ್ವಾಗತಕ್ಕೆ ಸಿದ್ಧತೆ ಮಾಡಲು ತಿಳಿಸಿದರು. ಶತಾನಂದರು ರಾಜಮರ್ಯಾದೆ ಯೊಡನೆ ಸ್ವಾಗತಿಸಲು ಸಿದ್ಧಮಾಡಿಕೊಂಡು ರಾಜಪರಿವಾರ ದೊಡನೆ ಹೊರಟರು.

ತಪಸ್ಸಿನ ಮೂರ್ತಿರೂಪವೇ ಎಂಬಂತೆ ಗಂಭೀರವಾಗಿ ಬರು ತ್ತಿದ್ದರು ಆ ಬ್ರಹ್ಮಜ್ಞಾನಿ ವಿಶ್ವಾಮಿತ್ರರು. ಅವರಷ್ಟೇ ಧೀರ ಗಂಭೀರವಾಗಿ ಇಬ್ಬರು ಕ್ಷತ್ರಿಯ ಬಾಲಕರು ಅವರನ್ನು ಹಿಂಬಾಲಿಸುತ್ತಿದ್ದರು. ಅವ ರನ್ನು ನೋಡಿದುದೇ ಒಂದು ಕ್ಷಣ ಹೃದಯ ಬಡಿತ ನಿಂತಂತಾಯಿತು ಶತಾನಂದರಿಗೆ. ಅವರು ದಶರಥ ಪುತ್ರರಾದ ರಾಮ ಲಕ್ಷ್ಮಣರೇ. ನನ್ನ ತಂದೆ ಹೇಳಿದ ದಶರಥಾತ್ಮಜನು ಇವನೇ ಇರಬೇಕು. ಏನು ತೇಜಸ್ಸು

ಮುಖದಲ್ಲಿ! ಶತಾನಂದರ ಎದೆಯಲ್ಲಿ ಆಸೆ ಅಂಕುರವಾಗುತ್ತಿರುವಾಗಲೇ ವಿಶ್ವಾಮಿತ್ರರು ಹತ್ತಿರ ಬಂದರು. ಕುಶಲೋಪರಿ ಮುಗಿಯಿತು. ಅರ್ಘ್ಯಪಾದ್ಯಗಳ ಉಪಚಾರವೂ ಮುಗಿ ಯಿತು. ವಿಶ್ವಾಮಿತ್ರರು ಮಹಾರಾಜನಿಗೆ ತನ್ನ ಜೊತೆಯಲ್ಲಿರು ವವರ ಪರಿಚಯ ಹೇಳುತ್ತಿದ್ದಾರೆ. ಶತಾನಂದರು ಮೈಯೆಲ್ಲಾ ಕಿವಿಯಾಗಿ ಕೇಳುತ್ತಿದ್ದಾರೆ. ''ಇವನು ಬಲಕ್ಕೆ ಇರುವವನು ಶ್ರೀರಾಮ, ದಶರಥಾತ್ಮಜ ರಾಮ..'' ಸಾಕಾಯ್ತು ಶತಾನಂದರಿಗೆ. ಮುಂದಿನ ಮಾತಾವುದೂ ಅವರ ಕಿವಿಗೆ ಬೀಳಲಿಲ್ಲ. ದಶರಥಾತ್ಮಜ ರಾಮ ವಿಶ್ವಾಮಿತ್ರರೊಡಗೂಡಿ ಬಂದಿದ್ದಾನೆ. ಇನ್ನು ನನ್ನಮ್ಮನ ಶಾಪ ವಿಮೋಚನೆಗೆ, ತನ್ನದೇ ಪ್ರಾಯಶ್ಚಿತ್ತದ ಬದುಕಿಗೆ ಕೊನೆಯಾದೀತು.. ಏಕಾಂತದಲ್ಲಿ ಭೇಟಿ ಮಾಡಬೇಕು ವಿಶ್ವಾಮಿತ್ರರರನ್ನು. ವಿಶ್ವಾಮಿತ್ರರು ಹೇಳುತ್ತಿದ್ದಾರೆ: ತಾವು ಸಾಗಿ ಬಂದ ಸ್ಥಳ.. ತಮ್ಮದೇ ಸಿದ್ಧಾಶ್ರಮದಿಂದ ಹೊರಟು, ವಿಶಾಲ ಪ್ರದೇಶ ದಾಟಿದುದು, ಮುಂದೆ ಗೌತಮನ ಆಶ್ರಮದ ಆತಿಥ್ಯ, ಈಗ ಜನಕರಾಜ ಸೀತೆಯ ವಿವಾಹಕ್ಕೆ ಪಣವಾಗಿಟ್ಟ ಶಿವ ಧನುಸ್ಸನ್ನು ಬಾಲಕರು ನೋಡ ಬಯಸಿದ್ದಾರೆ ಎಂದು. ಶತಾನಂದರ ಎದೆ ಧಸಕ್ಕೆಂದಿತು. ನನ್ನ ತಂದೆಯ ಆಶ್ರಮದಲ್ಲಿ ಏನು ನಡೆಯಿತು? ಏನೂ ನಡೆಯಲೇ ಇಲ್ಲವೆ? ಹಾಗಾದರೆ ನನ್ನ ನಿರೀಕ್ಷೆ? ಕಲ್ಲಾಗಿದ್ದ ತನ್ನ ಅಮ್ಮ ಕಲ್ಲಾಗೇ ಉಳಿದುಬಿಟ್ಟಳೆ? ತಂದೆ ಈ ವಿಷಯ ಪ್ರಸ್ತಾಪಿಸಲೇ ಇಲ್ಲವೆ? ಭಾರ ಮನಸ್ಸಿನಿಂದ ಶತಾನಂದರು ಸಾಯಂಕಾಲದ ಸಂಧ್ಯಾವಂದನೆಯ ಸಮಯ ವೆಂದು ವಿಶ್ವಾಮಿತ್ರರಿಂದ ಬೀಳ್ಕೊಂಡರು. ರಾತ್ರಿ ಬಹಳ ಹೊತ್ತಾದ ಮೇಲೆ ಧೈರ್ಯಮಾಡಿ ವಿಶ್ವಾಮಿತ್ರರ ಬಿಡಾರದತ್ತ ನಡೆದರು. ಬಾಗಿಲ ಬಳಿ ನಿಂತು, ''ಮುನಿವರ್ಯರೇ, ಒಳಗೆ ಬರಬಹುದೆ?'' ಎಂದು ಅನುಮತಿ ಬೇಡಿದರು. ಇವರನ್ನೇ ನಿರೀಕ್ಷಿಸುತ್ತಿರುವಂತೆ ವಿಶ್ವಾಮಿತ್ರರು ''ಯಾರು, ಶತಾನಂದನೆ? ಒಳಗೆ ಬಾ'' ಎಂದರು. ಒಳಗೆ ಬಂದುದೇ ದೀರ್ಘದಂಡ ನಮಸ್ಕಾರ ಮಾಡಿ, ''ಗುರುಗಳೇ, ತಮ್ಮ ಬಾಯಿಂದ 'ಗೌತಮನ ಆಶ್ರಮ' ಎಂಬ ಶಬ್ದ ಕೇಳಿದಾಗಿನಿಂದ ನಿರೀಕ್ಷೆ ಹೊತ್ತು ಬಂದಿದ್ದೇನೆ. ನಿರಾಶೆಗೊಳಿಸಬೇಡಿ. ನಿಮ್ಮ ವಿಶ್ರಾಂತಿಯ ಸಮಯ ವನ್ನು ಲೆಕ್ಕಿಸದೆ ಬಂದಿದ್ದೇನೆ. ಕ್ಷಮೆ ಇರಲಿ, ಮುನಿಶ್ರೇಷ್ಠ'' ಎಂದ.

''ನಿನ್ನ ಮನಸ್ಸನ್ನು ಅರ್ಥಮಾಡಿಕೊಳ್ಳಬಲ್ಲೆ , ಶತಾನಂದ, ನೀನೂ ತಾಯಿಯ ಮಗನಲ್ಲವೇ. ಕರುಳ ಸಂಬಂಧದ ಅಕ್ಕರೆ ತಪ್ಪಲ್ಲ. ಇರಬೇಕಾದುದೇ. ನಾನೇನು, ಹುಟ್ಟು ಬ್ರಹ್ಮರ್ಷಿಯಲ್ಲ. ನಿನ್ನ ಅವಸ್ಥೆಗಳನೆಲ್ಲಾ ನಾನೂ ದಾಟಿ ಬಂದವನು.''

''ಮಹರ್ಷಿಗಳೇ, ಇವನಲ್ಲವೇ ತಂದೆ ಅಂದು ಮುಂಗಂಡಿದ್ದ ದಶರಥಾತ್ಮಜರಾಮ? ಇವನೊಡನೆ ನಮ್ಮ ಆಶ್ರಮಕ್ಕೆ ಹೋದಿರೆ? ಅಮ್ಮನ ತಪದ ಅವಧಿ ಮುಗಿಯಿತೆ? ಅಮ್ಮ ಅಪ್ಪ ಒಂದಾದರೆ? ನನ್ನ ತಾಯಿ, ಕಳಂಕಿತಳೆ? ಇಂದ್ರನ ಧೂರ್ತತನದಿಂದ ಮೋಸ ಹೋದ ಸ್ತ್ರೀಯಲ್ಲವೆ ಆಕೆ? ಅದಕ್ಕೆ ಅಂತಹ ಕಠಿಣ ಶಿಕ್ಷೆಯೆ?''

''ಶತಾನಂದ, ಧರ್ಮವನ್ನು ಅರಿಯುವುದು ಬಹಳ ಕಷ್ಟ. ಚಿನ್ನ ಅಪ್ಪಟವಾಗಬೇಕಾದರೆ ಬೆಂಕಿಯಲ್ಲಿ ಕರಗಲೇಬೇಕು. ಅಹಲ್ಯೆ ಬೇಕೆಂದೇ ತಪ್ಪು ಮಾಡಿರಲಿಲ್ಲ. ಅದಕ್ಕಾಗಿ ಯೋಜನೆಗಳನ್ನು ಅವಳೇನೂ ಹಾಕಿಕೊಳ್ಳಲಿಲ್ಲ. ಕ್ಷಣದ ತೂಕಡಿಕೆಯ ಪರಿಣಾಮ. ಆದರೆ ಆಧ್ಯಾತ್ಮಿಕ ಜೀವನದಲ್ಲಿ ಯಾವಾಗಲೂ ಜಾಗೃತರಾಗಿರಬೇಕು. ಅವಳ ಮನದ ಯಾವುದೋ ಮೂಲೆಯಲ್ಲಿ ಆಸೆ ಸೂಕ್ಷ್ಮರೂಪದಲ್ಲಿ ಅಡಗಿತ್ತು. ಅದಕ್ಕಾಗಿ ಅವಳು ಬಹಳ ಬೆಲೆ ತೆತ್ತಳು. ಸಾವಿರ ಸಾವಿರ ವರ್ಷಗಳ ಕಠಿಣ ತಪಸ್ಸು ಮಾಡಿಯೂ ನಿರ್ದಿಷ್ಟವಾದ ಗುರಿಯಿದ್ದರೂ ನನ್ನಂಥ ವಿಶ್ವಾಮಿತ್ರನೇ ಮೇನಕೆಗೆ ಮರುಳಾಗಿ ತಪಸ್ಸಿನಿಂದ ವರ್ಷಗಟ್ಟಳೆ ವಿಮುಖರಾಗಬಲ್ಲೆವಾದರೆ, ನಿನ್ನಮ್ಮನ ಪಾಡೇನು? ಹಾಗೆಂದ ಮಾತ್ರಕ್ಕೆ ಜಾರಿದ್ದು ಸರಿ ಅಂತಲ್ಲ. ಅದೆರಡೂ ಗೊತ್ತಿದ್ದರಿಂದಲೇ ಗೌತಮರು ಅವಳಿಗೆ ಶಾಪಕೊಟ್ಟರು. ಕೂಡಲೇ ವಿಶಾಪವನ್ನೂ ಸೂಚಿಸಿದರು. ಗೌತಮರು ಕಠೋರ ಹೃದಯಿಯೇನಲ್ಲ. ಅವರೇನಾದರೂ 'ಅಹಲ್ಯೆ ಮುಗ್ಧೆ' ಎಂದುಕೊಂಡು ಕಠೋರ ಪ್ರಾಯಶ್ಚಿತ್ತ ವಿಧಿಸದಿದ್ದರೆ ಒಳ್ಳೆಯ ಮೇಲ್ಪಂಕ್ತಿಯಾಗುತ್ತಿರಲಿಲ್ಲ. ಗೊತ್ತಿದ್ದು ಜಾರಿದವರೂ ಅಹಲ್ಯೆಯ ಉದಾಹರಣೆ ಕೊಟ್ಟು ತಪ್ಪಿಸಿಕೊಳ್ಳುತ್ತಿದ್ದರು. ಮಾದರಿಯಾಗುವ ವ್ಯಕ್ತಿ ಬಹಳ ತ್ಯಾಗ ಮಾಡಬೇಕಾಗುತ್ತದೆ. ಗೌತಮರೂ ತುಂಬ ನೊಂದರು. ಹೆಂಡತಿಯ ತಪ್ಪು ಒಂದೆಡೆ, ಇಂದ್ರನ ಮೋಸ ಇನ್ನೊಂದೆಡೆ. ಇಂದ್ರನಿಗೆ ಮಾತ್ರ ಶಾಪ ಕೊಟ್ಟಿದ್ದರೆ ಪಕ್ಷಪಾತಿಯಾಗುತ್ತಿದ್ದರು. ಅಷ್ಟು ದಿನ ನಿಷ್ಠೆಯಿಂದ ಸೇವೆ ಮಾಡಿದ್ದ, ಪ್ರೀತಿಸಿದ ಹೆಂಡತಿಗೇ ಶಾಪ ಕೊಡಬೇಕಾಯಿತು. ಅದರಿಂದ ತಮ್ಮ ತಪಶಕ್ತಿಯನ್ನು ಸ್ವಲ್ಪ ಕಳೆದುಕೊಂಡರು. ಅದಕ್ಕೇ ಮತ್ತೆ ಘೋರ ತಪಸ್ಸಿನಲ್ಲೆ ತೊಡಗಿದರು.''

ಶತಾನಂದನ ಕಣ್ಣಲ್ಲಿ ನೀರು ಹರಿಯುತ್ತಿತ್ತು. ದುಃಖದ ಕಣ್ಣೀರೆ, ಆನಂದಬಾಷ್ಪವೆ? ಅವನಿಗೇ ತಿಳಿಯಲಿಲ್ಲ. ಮತ್ತೆ ಕೇಳಿದ, ''ಶ್ರೀರಾಮನಿಗೆ ಇದೆಲ್ಲವನ್ನೂ ತಿಳಿಸಿದಿರಾ?''

''ಹೌದು, ಎಲ್ಲವನ್ನೂ ಹೇಳಿದೆ. ಶ್ರೀರಾಮ, ಲಕ್ಷ್ಮಣ ಇಬ್ಬರೂ ಕಣ್ಣೀರು ಸುರಿಸಿದರು. ನಿನ್ನ ಅಮ್ಮನ ಆಶ್ರಮಕ್ಕೆ ಬಂದರು. ಅನ್ನಾಹಾರ ತ್ಯಜಿಸಿ, ಗಾಳಿ ಮಾತ್ರ ಸೇವಿಸಿ ಕೃಶಳಾಗಿದ್ದರೂ ತಪಸ್ಸಿನಿಂದ ದಿವ್ಯಪ್ರಭೆ ಪಡೆದಿದ್ದ ನಿನ್ನ ಅಮ್ಮ ಅವರ ಕಣ್ಣಿಗೆ ಕಂಡಳು. ಅವರಿಬ್ಬರೂ ತೇಜೋರೂಪೆಯಾದ ಅವಳ ಪಾದಗಳನ್ನು ಸೋಂಕಿದರು. ಅಹಲ್ಯೆಗೆ ಆಗಲೇ ಜೀವಭಾವ ಬಂದಿತು. ಇಬ್ಬರನ್ನೂ ಆದರಿಸಿ ಸತ್ಕರಿಸಿದಳು.''

''ಧನ್ಯನಾದೆ ಋಷಿವರ್ಯ. ನಮ್ಮ ತಂದೆ?''

''ಅವರೂ ಬಂದರು. ತ್ರಿಕಾಲ ಜ್ಞಾನಿಗಳಲ್ಲವೆ? ನಿನ್ನ ಅಮ್ಮನ ಶಾಪವಿಮೋಚನೆಯ ದಿನ, ಶ್ರೀರಾಮ ಬರುವ ದಿನ ಎಲ್ಲವನ್ನೂ ಮೊದಲೇ ಅರಿತಿದ್ದ ಗೌತಮರು ಆಗಲೇ ಆಶ್ರಮ ಸೇರಿದ್ದರು. ಅಹಲ್ಯೆ ಚೈತನ್ಯ ಹೊಂದುವ ಗಳಿಗೆಯಲ್ಲಿ ಅವರೂ ಅಲ್ಲಿದ್ದರು.. ಆಮೇಲೆ ಪತಿ-ಪತ್ನಿ ಇಬ್ಬರೂ ಒಟ್ಟುಸೇರಿ ಅತಿಥಿ ಪೂಜೆ ಮಾಡಿದರು.''

''ಧನ್ಯನಾದೆ ಮುನಿಶ್ರೇಷ್ಠರೇ, ಇದನ್ನು ಬಿಟ್ಟು ಬೇರೆ ಏನೂ ಹೇಳಲು ಮಾತು ಬರುತ್ತಿಲ್ಲ. ಈಗ ಶತಾನಂದ ಶತಾನಂದಿತ, ಶತಾನಂದ ಶತಾನಂದಿತ..''



ಭಾಗ ೪

# ಸ್ವಾಮಿ ಪ್ರೇಮಾನಂದರು

**ಸ್ವಾಮಿ ಅಶೋಕಾನಂದ**

ಅನುವಾದ: ಡಾ. ಇ. ವಸಂತಕುಮಾರ್



ದೀಕ್ಷೆಯ ವಿಷಯ ಒಂದಾದರೆ, ಬೇಲೂರು ಮಠದ ಯುವ ಸಂನ್ಯಾಸಿಗಳ ಶೀಲಸಂವರ್ಧನೆ, ಮತ್ತು ಅವರ ಮನಸ್ಸನ್ನು ರೂಪಿಸುವುದು ಮತ್ತೊಂದು ಜವಾಬ್ದಾರಿ. ಇದನ್ನು ಸ್ವಾಮಿಗಳು ಮಾಡುತ್ತಿದ್ದರು. ಸ್ವಾಮಿ ವಿವೇಕಾನಂದರು ಕಾಲವಾದ ನಂತರ, ಪ್ರೇಮಾನಂದರು ಅವರ ಜೀವಿತದ ಬಹು ಕಾಲ ರಾಮಕೃಷ್ಣ ಸಂಘದ ಪ್ರಧಾನ ಕೇಂದ್ರವಾದ ಬೇಲೂರು ಮಠದ ಮೇಲ್ವಿಚಾರಕರಾಗಿದ್ದರು. ಸ್ವಾಮೀಜಿಯವರ ನಂತರ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಅಧ್ಯಕ್ಷರಾದ ಸ್ವಾಮಿ ಬ್ರಹ್ಮಾನಂದರು ಬೇಲೂರು ಮಠದಲ್ಲಿ ಇರುತ್ತಿದ್ದುದು ಅಪರೂಪ. ಅವರು ಬಂದು ಹೋಗುತ್ತಿದ್ದರು. ಅನೇಕ ಕೇಂದ್ರಗಳಿಗೆ ಹೋಗುತ್ತ ಅವುಗಳ ನಿರ್ವಹಣೆಯನ್ನು ಗಮನಿಸುತ್ತ ಭಾರತದ ವಿವಿಧ ಭಾಗಗಳಲ್ಲಿ ಸಂಚರಿಸುತ್ತಿದ್ದರು. ಬೇಲೂರು ಮಠದಲ್ಲಿಯೇ ಇದ್ದು ಅಲ್ಲಿನ ಯುವಕ ಸಾಧುಗಳಿಗೆ ಮಾರ್ಗದರ್ಶನ ಮಾಡುತ್ತ ಶಿಕ್ಷಣ ನೀಡುತ್ತಿದ್ದವರು, ಸ್ವಾಮಿ ಪ್ರೇಮಾನಂದರು.

ಸ್ವಾಮಿ ವಿವೇಕಾನಂದರು, ಅವರ ಆಲೋಚನೆಗಳನ್ನು ಅನುಮಾನಿಸುತ್ತಿದ್ದವರನ್ನು ಸಂಘದ ಪ್ರಧಾನ ಕೇಂದ್ರದ ಮೇಲ್ವಿಚಾರಕರನ್ನಾಗಿ ಮಾಡಿದುದೇಕೆ ಎಂದು ನೀವು ಆಶ್ಚರ್ಯಪಡಬಹುದು. ಸಹಜವಾಗಿ ಸ್ವಾಮಿ ಪ್ರೇಮಾನಂದರು ಅತ್ಯಂತ ಅರ್ಹರು. ಸ್ವಾಮೀಜಿಯವರೊಂದಿಗೆ ಅಭಿಪ್ರಾಯಭೇದವಿದ್ದರೂ ಅವರು ಸಂನ್ಯಾಸ ಜೀವನದ ಸಾರವನ್ನು ಚೆನ್ನಾಗಿ ಬಲ್ಲವರಾಗಿದ್ದರು; ಶುದ್ಧವಾದ ಸಂಯಮದಿಂದ ಕೂಡಿದ ರಾಗರಹಿತ, ವೈರಾಗ್ಯಪರ ಭಕ್ತಿಭರಿತ ಹೃದಯವುಳ್ಳ ಜೀವನ ನಡೆಸುವುದು, ಧ್ಯಾನ, ತಪಸ್ಸು ಮುಂತಾದ ಆಧ್ಯಾತ್ಮಿಕ ಸಾಧನೆಗಳ ವಿಷಯದಲ್ಲಿ ಅವರಿಗೂ ಸ್ವಾಮಿ ವಿವೇಕಾನಂದರಿಗೂ ಯಾವ ಅಭಿಪ್ರಾಯಭೇದವೂ ಇರಲಿಲ್ಲ. ಅಂತಹ ಸಾಧ್ಯತೆಯೇ ಇಲ್ಲ. ಸ್ವಾಮೀಜಿ ಅವರನ್ನು ಇಂತಹ ವಿಶೇಷ ಸ್ಥಾನಕ್ಕೆ ಆರಿಸಿಕೊಂಡುದಕ್ಕೆ ಮುಖ್ಯವಾದ ಕಾರಣ, ಸ್ವಾಮಿ ಪ್ರೇಮಾನಂದರು ಕರುಣೆ ಮತ್ತು ಪ್ರೇಮದ ಮೂರ್ತಸ್ವರೂಪರಾಗಿದ್ದುದು ಎಂದು ನಾನು ಕೆಲವು ವೇಳೆ ಆಲೋಚಿಸುವೆನು. ಉದಾಹರಣೆಗೆ, ಸೂಕ್ತ ಸಮಯದಲ್ಲಿ ಅವರು ಅಸಂಖ್ಯ ವ್ಯಕ್ತಿಗಳನ್ನು, ವಿಶೇಷವಾಗಿ ಯುವಕರನ್ನು, ಸಂಘಕ್ಕೆ ಆಕರ್ಷಿಸಲು ಸಮರ್ಥರಾಗಿದ್ದರು. 'ರಾಷ್ಟ್ರೀಯ ಆಂದೋಲನ'ವೆಂಬುದು ೧೯೦೬ರಲ್ಲಿ ಪ್ರಾರಂಭವಾಗಿತ್ತು. ಸ್ವಾಮಿ ವಿವೇಕಾನಂದರೇ ಅದಕ್ಕೆ ಸ್ಫೂರ್ತಿಯನ್ನಿತ್ತಿದ್ದರು ಎಂದು ಕೆಲವು ಇತಿಹಾಸಕಾರರು ಹೇಳಿರುವರು. ಸ್ವಾಮೀಜಿಯವರು ಕಾಲವಾದ ಸ್ವಲ್ಪ ಸಮಯದಲ್ಲಿಯೇ ರಾಷ್ಟ್ರಜಾಗೃತಿಯ ದನಿ ಅಲ್ಲಲ್ಲಿ ದೇಶಾದ್ಯಂತ ಕೇಳತೊಡಗಿತು ಎಂಬುದು ನಿಜ. ಅದು ೧೯೦೬ರ ಸಮಯಕ್ಕೆ ಒಂದು ನಿರ್ದಿಷ್ಟ ಚಳುವಳಿಯಾಗಿ ವ್ಯಾಪಕವಾಯಿತು; ಅವರ ಚಕ್ರಾಧಿಪತ್ಯಕ್ಕೆ ಅಪಾಯ ಒದಗಬಹುದೆಂದು ಬ್ರಿಟಿಷರು ಜಾಗ್ರತರಾದರು. ಅವರು ಎಲ್ಲರೊಂದಿಗೂ, ರಾಮಕೃಷ್ಣ ಸಂಘದೊಂದಿಗೂ ಕೂಡ, ಕಠಿಣವಾಗಿ ವರ್ತಿಸಿದರು. ಸ್ವಾಮಿ ವಿವೇಕಾನಂದರ ಕೆಲವು ಪುಸ್ತಕಗಳ ಪ್ರಕಾಶನವನ್ನು ನಿಲ್ಲಿಸಲೂ ಪ್ರಯತ್ನಿಸಿದರು. ರಾಮಕೃಷ್ಣ ಸಂಘದ ಸ್ವಾಮಿಗಳನ್ನು ಸಂದೇಹಿಸಿದರು. ಇದರಿಂದಾಗಿ ಅನೇಕರು ಸರ್ಕಾರಕ್ಕೆ ಅವಿಧೇಯರಂತೆ ಕಾಣಬಹುದೆಂಬ ಭಯದಿಂದ ಮಠದಿಂದ ದೂರವಾದರು. ಆದರೆ ಸ್ವಾಮಿ ಪ್ರೇಮಾನಂದರಿಗೆ ಎಂತಹ ಆಕರ್ಷಕ ವ್ಯಕ್ತಿತ್ವವಿತ್ತೆಂದರೆ, ಇಷ್ಟೆಲ್ಲ ಅಡೆತಡೆಗಳಿದ್ದರೂ, ಕೇವಲ ಅವರನ್ನು ನೋಡಲು ಅನೇಕರು ಬೇಲೂರು ಮಠಕ್ಕೆ ಬರುತ್ತಿದ್ದರು. ಆ ಸಮಯದಲ್ಲೇ ಅನೇಕ ಯುವಕರು ಸ್ವಾಮಿಗಳ ಪ್ರಭಾವದಿಂದ ಮಠ ಸೇರಿದರು.

ವರುಷಗಳು ಕಳೆದಂತೆ ಅವರ ಆಕರ್ಷಣಾಶಕ್ತಿ ಬಲವಾಗುತ್ತ ಬಂದಿತು. ಹೆಚ್ಚು ಹೆಚ್ಚು ಯುವಕರು ಅವರಿಂದ ಆಕರ್ಷಿತರಾಗಿ ಮಠ ಸೇರಿದರು. ನಾನು ಕೂಡ ಅವರಲ್ಲೊಬ್ಬನಾಗಿದ್ದೆ. ನನ್ನ ಜತೆಯವರು ಅನೇಕರು ಅವರಿಂದ ಬೇಲೂರು ಮಠಕ್ಕೆ ಆಕರ್ಷಿತರಾಗಿ ಅವರ ತರಪೇತಿನಿಂದ ಭಾರತದಲ್ಲಿ ಮತ್ತು ಹೊರದೇಶಗಳಲ್ಲಿ ಅದ್ಭುತ ಕ್ರಿಯಾವಂತರಾದರು. ಕೆಲವರು ಶ್ರೀಮಾತೆಯವರ ಶಿಷ್ಯರು ಮತ್ತೆ ಕೆಲವರು ಸ್ವಾಮಿ ಬ್ರಹ್ಮಾನಂದರ ಶಿಷ್ಯರಾದರು. ಆದರೆ ಸ್ವಾಮಿ ಪ್ರೇಮಾನಂದರಿಗೆ ಅವರೆಲ್ಲಾ ಪ್ರೀತಿಪಾತ್ರರಾಗಿದ್ದರು. ಅವರನ್ನೆಲ್ಲ ಅತ್ಯಂತ ವಿಶ್ವಾಸದಿಂದ ಕಾಣುತ್ತಿದ್ದರು.

ಆ ಯುವಸಂನ್ಯಾಸಿಗಳೆಲ್ಲ ಮಾರ್ಗದರ್ಶನ ಮತ್ತು ಬುದ್ಧಿವಾದಕ್ಕಾಗಿ ಅವರ ಬಳಿಗೆ ಹೋಗುತ್ತಿದ್ದರು. ಅವರು ನಿಜವಾಗಿ ಮಠದ ತಾಯಿ ಎಂಬ ಭಾವನೆ ಒಬ್ಬರಿಂದ ಒಬ್ಬರಿಗೆ ಬಂದುಹೋಗಿತ್ತು. ಮಕ್ಕಳು ಮನೆಯಲ್ಲಿ ತಾಯಿಯೊಂದಿಗೆ ಸಲಿಗೆಯಿಂದ ಇರುವಂತೆ ಸಂನ್ಯಾಸಿಗಳು ಅವರೊಂದಿಗೆ ಸಲಿಗೆಯಿಂದ ಇರುತ್ತಿದ್ದರು, ಮತ್ತು ಸ್ವಾಮಿಗಳು ತಾಯಿಯಂತೆ – ಆಧ್ಯಾತ್ಮಿಕ ಪುರೋಗಮನ, ಕೆಲಸ, ಅಧ್ಯಯನ – ಎಲ್ಲವನ್ನೂ ನೋಡಿಕೊಳ್ಳುತ್ತಿದ್ದರು.

ಅವರು ಜನರಿಗೆ ಅಸಾಧಾರಣ ಸೇವೆಯನ್ನು ಮಾಡುತ್ತಿದ್ದರು. ಒಬ್ಬ ಯುವಕ ಮಠಕ್ಕೆ ಆಗಾಗ್ಗೆ ಬರುತ್ತಿದ್ದ. ಅವನ ಅಣ್ಣ ಮಠ ಸೇರಿಕೊಂಡಿದ್ದ. ಆ ಯುವಕ ಕುಡುಕ; ಸಾಮಾನ್ಯವಾಗಿ ನಶೆಯಲ್ಲಿರುತ್ತಿದ್ದ. ಆತನನ್ನು ಇತರರು ಹೇಗೆ ಕಾಣುತ್ತಿದ್ದರು ಮತ್ತು ಆತನಿಗೆ ಮನಸ್ಸಿಗೆ ಹೇಗೆ ಬೇಸರವಾಗುತ್ತಿತ್ತೆಂಬುದು ನಿಮಗೆ ತಿಳಿಯುವುದು. ಆತ ಮನಸ್ಸಮಾಧಾನಕ್ಕಾಗಿ ಮಠಕ್ಕೆ ಬರುತ್ತಿದ್ದ. ಸ್ವಾಮಿ ಪ್ರೇಮಾನಂದರು ಅವನನ್ನು ಬಹು ವಿಶ್ವಾಸದಿಂದ ಕಾಣುತ್ತಿದ್ದರು. ಕೆಲವು ವೇಳೆ ಅವನು ಕುಡಿದು ಬರುತ್ತಿದ್ದ. ಆಗಲೂ ಸ್ವಾಮಿಗಳು ಅವನನ್ನು ವಿಶ್ವಾಸದಿಂದ ಕಾಣುತ್ತಿದ್ದರು. ಸ್ವಲ್ಪ ಕಾಲದಲ್ಲೆಯೇ ಅವನು ಬದಲಾದ. ಅವನ ದುರಭ್ಯಾಸಗಳು ಅವನನ್ನು ಬಿಟ್ಟವು. ಅವನು ಮಠ ಸೇರಿದ. ನಂತರ ಅವನು ಅದ್ಭುತ ಕ್ರಿಯಾವಂತನಾದ. ಎಲ್ಲರ ಗೌರವಕ್ಕೂ ಪಾತ್ರನಾದ. ಸ್ವಾಮಿ ಪ್ರೇಮಾನಂದರ ಪ್ರೇಮಕ್ಕೆ ಅವನು ಒಬ್ಬ ದ್ಯೋತಕ. ಅವನೊಬ್ಬನೇ ಏಕೆ? ಒಂದು ತಲೆಮಾರಿನ ಸಾಧುಗಳೆಲ್ಲರೂ ದ್ಯೋತಕವೇ. ಅವರ ಕಾಲದಲ್ಲಿ ಅನೇಕ ಯುವಕರು ಮಠವನ್ನು ಸೇರಿ ಮಾನವಸೇವೆಯ ಮೂಲಕ ಭಗವಂತನ ಸೇವೆಯ ಆದರ್ಶವನ್ನು ಕೈಕೊಂಡು ಮಠದ ಅದ್ಭುತ ಕ್ರಿಯಾಶೀಲ ನಿಸ್ವಾರ್ಥ ಸಾಧುಗಳಾಗಿದ್ದರೆ, ಅದರ ಅರ್ಧ ಕೀರ್ತಿ ಸ್ವಾಮಿ ಪ್ರೇಮಾನಂದರಿಗೆ ಸಲ್ಲುವುದು.

ಸಂಘದಲ್ಲಿ ಈ ಮುಖ್ಯ ಪಾತ್ರವನ್ನು ಅವರು ವಹಿಸಬೇಕಾಗಿದ್ದುದರಿಂದಲೇ ಸ್ವಾಮಿ ವಿವೇಕಾನಂದರು ಅವರಿಗೆ ಕಠಿಣ ತರಬೇತಿಯನ್ನು ಕೊಟ್ಟರು ಎಂಬುದು ನಿಸ್ಸಂಶಯವಾದ ವಿಷಯ. ಅವರು ತಮ್ಮ ದೃಷ್ಟಿಕೋನವನ್ನು ಬದಲಾಯಿಸಬೇಕಾಗಿತ್ತು. ಆದರೆ ಸ್ವಾಮಿ ಪ್ರೇಮಾನಂದರಲ್ಲಿ ಈ ಬದಲಾವಣೆ ನಿಜವಾಗಿ ಆದುದು ಸ್ವಾಮಿ ವಿವೇಕಾನಂದರು ಕಾಲವಾದ ಹತ್ತು ವರ್ಷಗಳಾದ ನಂತರ, ಒಂದು ಭಯಂಕರ ಕಾಯಿಲೆಯಿಂದ ಅವರು ಗುಣಮುಖರಾದ ಮೇಲೆ. ಒಂದು ವರ್ಷಕ್ಕೂ ಹೆಚ್ಚು ಕಾಲ ಅವರು ಮಿಷನ್ನಿನ ಬನಾರಸ್ ಆಸ್ಪತ್ರೆಯಲ್ಲಿ ಇದ್ದರು. ಆ ಅವಕಾಶವನ್ನು ಉಪಯೋಗಿಸಿಕೊಂಡು ಸ್ವಾಮಿ ವಿವೇಕಾನಂದರ ಎಲ್ಲಾ ಪುಸ್ತಕಗಳನ್ನೂ ಓದಲು ನಿರ್ಧರಿಸಿದರು. ಅವರಿಗೆ ಸ್ವಲ್ಪ ಇಂಗ್ಲಿಷ್ ಬರುತ್ತಿದ್ದರೂ, ಸ್ವಾಮಿಜಿಯವರ ಕೃತಿಶ್ರೇಣಿಯ ಬಂಗಾಲಿ ಅನುವಾದವನ್ನು ಓದಿದರು. ಮುಗಿಸುವ ಹೊತ್ತಿಗೆ ಅವರು ಮಾರ್ಪಾಟಾಗಿದ್ದರು. ಅವರು ಆಗಾಗ ಹೇಳುತ್ತಿದ್ದರು, ಅವರು ಬಹುಕಾಲ ಅನುಮೋದಿಸದೆ ಇದ್ದುದನ್ನು ಸರಿಪಡಿಸಿಕೊಳ್ಳುವುದಕ್ಕೊ ಎನ್ನುವಂತೆ, ನಾನು ಸ್ವಾಮಿ ವಿವೇಕಾನಂದರ ಶಿಷ್ಯ ಎಂದು. ಅವರಲ್ಲಾದ ಈ ಬದಲಾವಣೆಯನ್ನು ಕಂಡು ಜನರು ಅಚ್ಚರಿ ಪಡುತ್ತಿದ್ದರು. ಅವರೇ ಈ ವಿಷಯವನ್ನು ನನಗೆ ಹೇಳಿದರು.

ಒಂದು ದಿನ ೧೯೧೩ರ ಶರತ್ಕಾಲದಲ್ಲಿ ನನ್ನ ಇಬ್ಬರು ಕಾಲೇಜು ಮಿತ್ರರೊಂದಿಗೆ ನಾನು ಬೇಲೂರು ಮಠಕ್ಕೆ ಹೋದೆ. ಸ್ವಾಮಿ ಪ್ರೇಮಾನಂದರು ಒಬ್ಬರೇ ಇದ್ದರು. ಅವರು ನಮ್ಮೊಡನೆ ಮಾತನಾಡಿದರು. ಈ ಕುರ್ಚಿಗಳು, ಮೇಜುಗಳು ಮತ್ತು ಇನ್ನಿತರ ಮರದ ವಸ್ತುಗಳನ್ನು ನೋಡುತ್ತಿರುವಿರಲ್ಲವೆ? ಸ್ವಾಮೀಜಿ ೧೮೯೭ರಲ್ಲಿ ಅಮೆರಿಕಾದಿಂದ ಹಿಂತಿರುಗಿದ ಮೇಲೆ ಇವೆಲ್ಲ ಬೇಕೆಂದು ಹೇಳಿದರು. ನಮಗೆ ಗಾಬರಿಯಾಯಿತು. ನಾವು ಶ್ರೀರಾಮಕೃಷ್ಣರೊಂದಿಗೆ ನೋಡಿದ್ದುದು ಬೇರೆಯೇ ಆಗಿತ್ತು. ಅವರು ಒಂದು ಸಾಧಾರಣವಾದ ಕೊಠಡಿಯಲ್ಲಿ ವಾಸವಾಗಿದ್ದರು. ಅದರಲ್ಲಿ ಯಾವ ಕುರ್ಚಿ, ಮೇಜುಗಳೂ ಇರಲಿಲ್ಲ. ಕೇವಲ ಎರಡು ಮಂಚಗಳಿದ್ದುವು; ಅದರ ಮೇಲೆ ಅವರು ಕುಳಿತುಕೊಳ್ಳುತ್ತಿದ್ದರು ಮತ್ತು ಮಲಗುತ್ತಿದ್ದರು. ಅವರು ದೇವರಲ್ಲದೆ ಬೇರೆ ಯಾವ ವಿಷಯವನ್ನೂ ಕೇಳಲು ಇಚ್ಛಿಸುತ್ತಿರಲಿಲ್ಲ. ಅವರು ಭಗವನ್ಮಯರಾಗಿದ್ದರು. ಅವರು ದೇವರ ವಿಷಯವಾಗಿ ಮಾತನಾಡುತ್ತಿದ್ದರು; ಹಾಡುತ್ತಿದ್ದರು, ದೇವರ ಹೆಸರನ್ನು ಕೇಳಿದಾಗ ಭಾವಾವಿಷ್ಟರಾಗಿ ಸಮಾಧಿಗೆ ಹೋಗುತ್ತಿದ್ದರು. ನಮಗೆ ಅವನ್ನು ಹೇಳಿಕೊಟ್ಟರು. ಈ ಸಂಘ ಅಥವಾ ಆಸ್ಪತ್ರೆಗಳು, ಶಾಲೆಗಳು, ಪತ್ರಿಕೆಗಳ ಬಗ್ಗೆ ಹೇಳಿಕೊಡಲಿಲ್ಲ. ಆದ್ದರಿಂದ ನಾವು, 'ಸ್ವಾಮೀಜಿ ಶ್ರೀರಾಮಕೃಷ್ಣರ ಮಾರ್ಗವನ್ನು ಬದಲಾಯಿಸುತ್ತಿರುವರು; ಅವರ ಬೋಧನೆ ಸಂಪೂರ್ಣವಾಗಿ ಬೇರೆಯದಾಗಿದೆ' ಎಂದು ಹೇಳಿದೆವು. ಅದು ನಮಗೆ ಒಪ್ಪಿಗೆಯಾಗಲಿಲ್ಲ. ಆದರೆ ಕಾಲ ಕಳೆದಂತೆ, ನನಗೆ ಚೆನ್ನಾಗಿ ಮನದಟ್ಟಾಗಿದೆ, ನಾವು ಶ್ರೀರಾಮಕೃಷ್ಣರನ್ನು ಸ್ವಾಮೀಜಿಯವರ ದೃಷ್ಟಿಯಿಂದ ನೋಡದ ಹೊರತು, ಶ್ರೀರಾಮಕೃಷ್ಣರು ಏನಾಗಿದ್ದರು, ನಾವು ಏನು ಮಾಡಬೇಕೆಂದು ಅವರು ಬಯಸಿದ್ದರು ಎಂಬುದು ನಮಗೆ ತಿಳಿಯುವುದಿಲ್ಲ. ಹೀಗೆ ಹೇಳುತ್ತ ಅವರು ಉತ್ಸುಕರಾದರು. ನಂತರ ಹೇಳಿದರು, ನಾನೀಗ ಸ್ವಾಮೀಜಿಯವರ ಶಿಷ್ಯ. ನೀವು ಶ್ರೀರಾಮಕೃಷ್ಣರನ್ನು ಎಂದಾದರೂ ಅರ್ಥ ಮಾಡಿಕೊಳ್ಳಬೇಕೆಂದಿದ್ದರೆ, ಸ್ವಾಮಿಜಿಯವರ ಕೃತಿಗಳನ್ನು ಓದಿ. ಅವರನ್ನು ಕುರಿತು ಚಿಂತಿಸಿ. ನಾವು ಏನನ್ನು ಮಾಡಬೇಕೆಂದು ಅವರು ಹೇಳಿದರೊ, ಅದನ್ನು ಮಾಡಿ. ಅದೊಂದೇ ಮಾರ್ಗ! ನಂತರದ ಕಾಲದಲ್ಲಿ ಇದನ್ನು ಅವರು ಸಾರ್ವಜನಿಕವಾಗಿ ಅನೇಕ ಬಾರಿ ಹೇಳಿದರು, ಮತ್ತು ಯುವ ಸಂನ್ಯಾಸಿಗಳಿಗೆ ಹೇಳುತ್ತಿದ್ದರು: ಹೋಗಿ, ಸ್ವಾಮಿ ವಿವೇಕಾನಂದರ ಮೇಲೆ ಧ್ಯಾನಿಸಿ, ಮೊದಲು ಅವರ ಭಾವಧಾರೆಯಿಂದ ಆವೃತರಾಗಿ, ನಂತರ ನೀವು ಶ್ರೀರಾಮಕೃಷ್ಣರನ್ನು ಅರ್ಥ ಮಾಡಿಕೊಳ್ಳಲು ಸಿದ್ಧರಾಗುವಿರಿ.

ಅವರು ಸ್ವಾಮಿ ವಿವೇಕಾನಂದರ ಬೋಧನೆಗಳ ಪ್ರಜ್ವಲ ಪ್ರಚಾರಕರಾದರು. ಪ್ರಚಾರದ ಮಹೋತ್ಸಾಹ ಅವರನ್ನು ಆವರಿಸಿತು. ಅವಕಾಶವಾದಾಗಲೆಲ್ಲ ಹೊರಗಡೆ ಹೋಗಿ ಉಪನ್ಯಾಸ ಮಾಡಿದರು. ಸ್ವಾಮೀಜಿಯವರ ಆದರ್ಶಗಳಿಗೆ ತಮ್ಮನ್ನು ಅರ್ಪಿಸಿಕೊಳ್ಳಿರೆಂದು ಯುವಕರಿಗೆ ಕರೆ ನೀಡುತ್ತಿದ್ದರು. ಅವರೊಂದು ಪ್ರಬಲ ಅಯಸ್ಕಾಂತವಾದರು. ಅನೇಕ ವೇಳೆ ಬಂಗಾಲದ ವಿವಿಧ ಭಾಗಗಳಿಂದ ಮಾತನಾಡಲು ಅವರಿಗೆ ಕರೆ ಬರುತ್ತಿತ್ತು. ಕೆಲವು ವೇಳೆ ಹಲವು ಸಾವಿರ ಜನಸ್ತೋಮದ ಗಮನ ಸೆಳೆದು ದೀರ್ಘ ಉಪನ್ಯಾಸ ಮಾಡುತ್ತಿದ್ದರು, ಕಿಡಿ ಕಾರುವಂತೆ ಪ್ರವಚನ ಮಾಡುತ್ತಿದ್ದರು.

ಅವರಿಗೆ ಶಾಲಾವಿದ್ಯಾಭ್ಯಾಸ ಅಷ್ಟೇನೂ ಇರದಿದ್ದರೂ ಅವರು ಹೇಗೆ ಉಪನ್ಯಾಸ ಮಾಡುತ್ತಿದ್ದರೆಂದು ನೀವು ಕೇಳಬಹುದು. ನಾನು ಹೇಳುತ್ತೇನೆ ಕೇಳಿ. ಅಂತಹ ಮಹಾತ್ಮರು ಪಂಡಿತರಾಗಿರಬೇಕಾಗಿರಲಿಲ್ಲ. ತತ್ತ್ವ ಮತ್ತು ಧರ್ಮ ಅವರ ಸ್ವಂತ ಅನುಭವದ ವಿಷಯವಾಗಿತ್ತು. ಅದಲ್ಲದೆ, ಪ್ರಾರಂಭಿಕ ದಿನಗಳಲ್ಲಿ ಸ್ವಾಮಿ ವಿವೇಕಾನಂದರು ಅವರಿಗೆ ಅನೇಕ ವಿಷಯಗಳಲ್ಲಿ ಅದ್ಭುತ ಶಿಕ್ಷಣವನ್ನು ನೀಡಿದ್ದರು. ಮಠದಲ್ಲಿ ಅನೇಕ ಘಂಟೆಗಳು ಬೋಧನೆ ಮತ್ತು ಚರ್ಚೆ ಇರುತ್ತಿತ್ತು. ಜತೆಗೆ ತಮ್ಮ ತಮ್ಮ ಸ್ವಂತ ಅಧ್ಯಯನವೂ ಇರುತ್ತಿತ್ತು. ಸಾಧಾರಣ ದೃಷ್ಟಿಯಿಂದಲೂ ಕೂಡ ಶ್ರೀರಾಮಕೃಷ್ಣರ ಸಂನ್ಯಾಸಿ ಶಿಷ್ಯರೆಲ್ಲರೂ ಜ್ಞಾನಿಗಳು. ಆದ್ದರಿಂದ, ಶಾಲಾ ವಿದ್ಯಾಭ್ಯಾಸ ವಿಶೇಷವಾಗಿ ಇಲ್ಲದಿದ್ದರೂ, ಸ್ವಾಮಿ ಪ್ರೇಮಾನಂದರು ಅವರ ಕಾಲದ ಶ್ರೇಷ್ಠ ಉಪನ್ಯಾಸಕರಲ್ಲೊಬ್ಬರಾಗಿದ್ದರು. ಅವರ ಸಾರ್ವಜನಿಕ ಉಪನ್ಯಾಸವನ್ನು ಕೇಳುವ ಅವಕಾಶ ನನಗೆ ದೊರೆತಿರಲಿಲ್ಲ. ಆದರೆ, ಅವರ ಸಂಗಡ ಉಪನ್ಯಾಸಗಳಿಗೆ ಹೋಗಿದ್ದ ಸಂನ್ಯಾಸಿಗಳಿಂದ ಅವರ ಉಪನ್ಯಾಸ ಒಂದು ಅದ್ಭುತ ಅನುಭವವಾಗಿತ್ತೆಂದು ಕೇಳಿರುವೆನು. ಅವರು ಜನರ ಮನಸ್ಸಿನ ಮೇಲೆ ಅಂತಹ ಆಳವಾದ ಪರಿಣಾಮವನ್ನುಂಟು ಮಾಡಲು ಸಾಧ್ಯವೆಂಬುದನ್ನು ನೀವು ನಂಬಲಾರಿರಿ. ಅವರ ಭಾವನೆಗಳು ಅದ್ಭುತವಾಗಿದ್ದುವು. ಅವರ ಭಾಷೆ ಅದ್ಭುತವಾಗಿತ್ತು. ಜನರು ನಿಶ್ಶಬ್ದವಾಗಿ ಆಲಿಸುತ್ತಿದ್ದರು. ಮೃದುಸ್ವಭಾವದ ಕೋಮಲ ಮುಖದ ವ್ಯಕ್ತಿಯಿಂದ ಅಗ್ನಿಯಂತಹ ಮಾತುಗಳನ್ನು ಕೇಳುವುದು ಒಂದು ದಿವ್ಯ ಅನುಭವವಾಗಿತ್ತು.

ಸ್ವಾಮೀಜಿಯವರ ಆಲೋಚನೆಗಳಿಂದ ಅವರು ಪರಿವರ್ತನೆಗೊಂಡ ಬಳಿಕ ಅವರ ಮುಖಕಾಂತಿ ತೀಕ್ಷ್ಣವಾಗಿರುವಂತೆ ಕಾಣುತ್ತಿತ್ತು. ನಾನು ಅವರನ್ನು ಮೊದಲ ಬಾರಿ ನೋಡಿದುದು ೧೯೧೨ ರಲ್ಲಿ. ಆಗ ನಾನು ಪ್ರೌಢಶಾಲೆಯಲ್ಲಿ ಓದುತ್ತಿದ್ದೆ. ನಮ್ಮ ಅಧ್ಯಾಪಕರೊಬ್ಬರು ನನ್ನನ್ನು ಶ್ರೀರಾಮಕೃಷ್ಣರ ಜನ್ಮದಿನದಂದು ಬೇಲೂರು ಮಠಕ್ಕೆ ಕರೆದೊಯ್ದಿದ್ದರು. ಅನೇಕ ಮಹಾನ್ ಸ್ವಾಮಿಗಳು ಅಲ್ಲಿ ಇದ್ದರು. ನಾನು ಅವರಿಂದ ಬಹುಪ್ರಭಾವಿತನಾದೆ. ಅಂತಹ ಅದ್ಭುತ ವ್ಯಕ್ತಿಗಳು ಇರುವರೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ. ಅವರು ಈ ಲೋಕದ ನಿವಾಸಿಗಳಂತೆ ಕಾಣುತ್ತಿರಲಿಲ್ಲ; ಅಂತಹ ಗಾಂಭೀರ್ಯ ಆನಂದ ಪಾವಿತ್ರ್ಯ ಸ್ವಾತಂತ್ರ್ಯಭಾವ ಮತ್ತು ನಿರ್ಭೀತಿ ಅವರಲ್ಲಿ ಕಾಣುತ್ತಿತ್ತು. ಆದರೆ ಸ್ವಾಮಿ ಪ್ರೇಮಾನಂದರು ಎಂದೂ ಎದ್ದು ಕಾಣುತ್ತಿರಲಿಲ್ಲ. ಇಂದಿಗೂ ಅವರ ರೂಪ ಕಣ್ಣಿಗೆ ಕಟ್ಟಿದಂತಿದೆ; ಅವರು ಒಂದು ಗುಂಪಿನ ತುದಿಯಲ್ಲಿ ನಿಂತು ಮೆಲ್ಲನೆ ತಲೆದೂಗುತ್ತ ಭಕ್ತಿಸಂಗೀತವನ್ನು ಕೇಳುತ್ತಿರುವವರಂತೆ ಕೈ ತಟ್ಟುತ್ತಿದ್ದರು. ಅವರು ತುಂಬ ಸಂಕೋಚ ಮತ್ತು ಮೃದು ಸ್ವಭಾವದವರಂತೆ ಕಂಡರು. ಅವರು ವಿಶೇಷವಾದ ವ್ಯಕ್ತಿಯಂತೆ ಏನೂ ಕಾಣುತ್ತಿರಲಿಲ್ಲ. ಶ್ರೀರಾಮಕೃಷ್ಣರ ಶಿಷ್ಯರಾದ ಅವರು ಏಕೆ ಹೆಚ್ಚು ಪ್ರಭೆಯಿಂದ ಕಾಣಬಾರದು ಎಂದು ನಾನು ಆಶ್ಚರ್ಯ ಪಟ್ಟೆ. ನಂತರ ನಾನು ಸುಮಾರು ಒಂದುವರೆ ವರ್ಷ ಅವರನ್ನು ನೋಡಲಿಲ್ಲ. ಅಷ್ಟರಲ್ಲಿ ಅವರು ಮಾರ್ಪಾಟಾಗಿದ್ದರು. ಸ್ವಲ್ಪ ದಪ್ಪವಾಗಿದ್ದರು. ಉತ್ಸಾಹಭರಿತರಂತೆ ಕಾಣುತ್ತಿದ್ದರು. ಹಿಂದೆ ಕಂಡ ಸೌಮ್ಯ ಅಹಂಕಾರಶೂನ್ಯ ಭಾವ ಹೋಗಿತ್ತು. ಅದರ ಸ್ಥಾನದಲ್ಲಿ ಒಂದು ಮೃದುಶಕ್ತಿ – ಮೃದು, ಏಕೆಂದರೆ ಸಾಮಾನ್ಯವಾಗಿ ಎಲ್ಲ ಆಧ್ಯಾತ್ಮಿಕ ವ್ಯಕ್ತಿಗಳಲ್ಲಿ ಕಾಣುವ ಹೋರಾಟದ ಉತ್ಸಾಹ ಲೇಶವೂ ಅವರಲ್ಲಿ ಕಾಣುತ್ತಿರಲಿಲ್ಲ. ಅಹಂಕಾರಪೂರಿತ ಉತ್ಸಾಹದ ವಿಷಯ ನಾನು ಹೇಳುತ್ತಿಲ್ಲ, ಆತ್ಮಕಾಂತಿಯ ಅಂತಃಶಕ್ತಿಯಿಂದ ಹೊಮ್ಮುವ ಒಂದು ಬಗೆಯ ಶಕ್ತಿಯ ಬಗ್ಗೆ ಹೇಳುತ್ತಿದ್ದೇನೆ. ನೀವು ಅಂತಹ ವ್ಯಕ್ತಿಗಳನ್ನು ಕಂಡಾಗ ಅವರ ಮುಂದೆ ನಿಲ್ಲುವುದು ಕಷ್ಟವಾಗುವುದು, ಅವರ ಪ್ರಭಾವ ಅಷ್ಟು ಶಕ್ತಿಶಾಲಿಯಾಗಿರುವುದು. ಆಗ ನೀವು ಸಹಜ ಸ್ಥಿತಿಯಲ್ಲಿ ಇರಬೇಕಾದರೆ ನೀವು ವಿಶೇಷವಾಗಿ ವಿಕಾಸವಾಗಿರಬೇಕು. ಶ್ರೀರಾಮಕೃಷ್ಣರ ಶಿಷ್ಯರನೇಕರಲ್ಲಿ ಅಂತಹ ಶೌರ್ಯಶಕ್ತಿ ಇತ್ತು; ಆದರೆ ಸ್ವಾಮಿ ಪ್ರೇಮಾನಂದರ ಸಾನ್ನಿಧ್ಯ, ಬೆಳಗುವ ಸೂರ್ಯನಂತಿರದೆ, ತಂಪಾದ ಚಂದ್ರನಂತೆ ಮನೋಹರವಾಗಿತ್ತು.

ಆ ದೊಡ್ಡ ಬದಲಾವಣೆಯ ನಂತರ ಅವರು ಸ್ವಾಮೀಜಿಯವರ ಸೇವೆಯ ನಾನಾ ಆಲೋಚನೆಗಳನ್ನು ಕಾರ್ಯರೂಪಕ್ಕೆ ತರುವುದಕ್ಕೆ ತೊಡಗಿದರು. ಉದಾಹರಣೆಗೆ, ರಾಮಕೃಷ್ಣ ಮಿಷನ್ನಿನ ಬಂಗಾಲದ ಪರಿಹಾರ ಸೇವಾಕಾರ್ಯದಲ್ಲಿ ಅವರೇ ಜೀವನಾಡಿಯಾಗಿದ್ದರು. ಮತ್ತು ಸ್ವಾಮೀಜಿಯವರು ಇಚ್ಛಿಸಿದಂತೆ, ಮಠವನ್ನು ಸಂಸ್ಕೃತ ವಿದ್ಯಾಭ್ಯಾಸದ ಕೇಂದ್ರವನ್ನಾಗಿ ಮಾಡಲು ಯತ್ನಿಸಿದರು. ಆದರೆ ಸಂನ್ಯಾಸಿಗಳ ತರಬೇತಿ, ನನ್ನ ಅಭಿಪ್ರಾಯದಲ್ಲಿ, ಅವರ ಅತ್ಯಂತ ಮುಖ್ಯವಾದ ಕಾರ್ಯವಾಗಿತ್ತು. ಇದನ್ನು ಅವರ ಬೋಧನೆ ಮತ್ತು ಅದಕ್ಕೆ ಸರಿಸಮನಾಗಿ ಅವರ ನಿತ್ಯಜೀವನದ ಮೂಲಕ ಮಾಡಿದರು.

–೪–

ಅವರು ಬೇಲೂರು ಮಠದ ಜವಾಬ್ದಾರಿಯನ್ನು ಹೊತ್ತಿದ್ದ ಕಾಲದಲ್ಲಿ ಅವರ ನಿತ್ಯ ಜೀವನ ಹೇಗಿತ್ತೆಂದು ನಿಮಗೆ ವಿವರಿಸುತ್ತೇನೆ. ಅದು ಅತ್ಯಂತ ಆದರ್ಶಪ್ರಾಯವಾಗಿತ್ತು. ಅವರು ಮಲಗುವ

ಕಾಲದಿಂದ ಪ್ರಾರಂಭಿಸುತ್ತೇನೆ. ಏಕೆಂದರೆ ಆಧ್ಯಾತ್ಮಿಕ ಜೀವಿಗಳಿಗೆ ದಿನ ಅವರು ಮಲಗುವ ಸಮಯದಿಂದ ಪ್ರಾರಂಭವಾಗುತ್ತದೆ. ಅವರು ಮಲಗುವ ಸಮಯ ಸುಮಾರು ರಾತ್ರಿ ೧೧ ಗಂಟೆ. ಮೂರು ಅಥವಾ ಮೂರುವರೆ ಗಂಟೆಗೆ ಏಳುತ್ತಿದ್ದರು. ಅವರ ನಿದ್ರಾಕಾಲ ಸಾಮಾನ್ಯವಾಗಿ ನಾಲ್ಕು ಗಂಟೆಗಳು ಅಥವಾ ಅದಕ್ಕಿಂತ ಕಡಿಮೆ. ಆದರೂ ನೋಡುವುದಕ್ಕೆ ಆಯಾಸಗೊಂಡವರಂತೆ ಅಥವಾ ನಿದ್ರೆ ಕಡಿಮೆಯಾದವರಂತೆ ಕಾಣುತ್ತಿರಲಿಲ್ಲ. ಶುಚಿಯಾಗಿ ವಸ್ತ್ರ ಧರಿಸಿ ದೇವರ ಧ್ಯಾನ ಮಾಡುತ್ತಿದ್ದರು. ಇನ್ನೂ ಕತ್ತಲಾಗಿರುವಾಗಲೆ ಮಂದಿರದ ಬಾಗಿಲು ತೆರೆಯುತ್ತಿದ್ದರು; ನಂತರ ಸಂನ್ಯಾಸಿಗಳು ಒಟ್ಟಿಗೆ ಸೇರಿ ಧ್ಯಾನ ಮಾಡುವ ಕೋಣೆಗೆ ಹೋಗಿ ಅವರೊಂದಿಗೆ ಎರಡು ಅಥವಾ ಮೂರು ಗಂಟೆಗಳು ಧ್ಯಾನ ಮಾಡುತ್ತಿದ್ದರು. ನಂತರ, ಸ್ವಾಮಿ ಬ್ರಹ್ಮಾನಂದರು ಬೇಲೂರು ಮಠದಲ್ಲಿ ಇದ್ದರೆ ಎಲ್ಲರೂ ಅವರ ಕೋಣೆಗೆ ಹೋಗಿ ಅವರಿಗೆ ನಮಸ್ಕರಿಸುತ್ತಿದ್ದರು. ಅಲ್ಲಿ ಭಕ್ತಿಸಂಗೀತ ಮತ್ತು ಇನ್ನಷ್ಟು ಧ್ಯಾನ ಆಗುತ್ತಿತ್ತು. ಅಷ್ಟು ಹೊತ್ತಿಗೆ ಎಂಟು ಗಂಟೆಯಾಗಿರುತ್ತಿತ್ತು. ಪದ್ಧತಿಯಂತೆ ಸಂನ್ಯಾಸಿಗಳು ಸ್ವಾಮಿ ಪ್ರೇಮಾನಂದರನ್ನು ಕಂಡು ಆ ದಿನ ಅವರು ಮಾಡಬೇಕಾದ ಕೆಲಸದ ಬಗ್ಗೆ ತಿಳಿಸುತ್ತಿದ್ದರು. ಪ್ರತಿಯೊಬ್ಬರೂ ಅವರವರ ಕೆಲಸ ಮಾಡಲು ಹೋಗುತ್ತಿದ್ದರು. ಅಧ್ಯಯನ ಮಾಡಲು ಇಚ್ಛಿಸುತ್ತಿದ್ದವರು, ಅಧ್ಯಯನ ಮಾಡಲು ಹೋಗುತ್ತಿದ್ದರು; ತೀವ್ರ ಧ್ಯಾನ ಮಾಡುವವರು ಅದಕ್ಕೆ ಹೋಗುತ್ತಿದ್ದರು – ಇಡೀ ದಿನ ಧ್ಯಾನ ಮಾಡುವಂತಹವರು ಕೆಲವರು ಇದ್ದರು. ಬಹುತೇಕ ಸಂನ್ಯಾಸಿಗಳು ಮಠದ ಕೆಲಸ ಮಾಡುತ್ತಿದ್ದರು.

ಯಾರಿಗೆ ತರಕಾರಿಯನ್ನು ಅಡಿಗೆಗೆ ಸಿದ್ಧಪಡಿಸುವ ಕೆಲಸ ನಿಗದಿಯಾಗಿತ್ತೊ ಅವರೊಡನೆ ಪ್ರೇಮಾನಂದರೇ ಕುಳಿತುಕೊಂಡು ತರಕಾರಿಗಳನ್ನು ತೊಳೆದು ಬಿಡಿಸಿ ಕತ್ತರಿಸಿ ಮಧ್ಯಾಹ್ನದ ಊಟಕ್ಕೆ ಸಿದ್ಧಪಡಿಸುತ್ತಿದ್ದರು. ಅವರೆಲ್ಲರೂ ಮುಖ್ಯ ಪಾಕಶಾಲೆಯ ಹತ್ತಿರ ಕುಳಿತುಕೊಳ್ಳುತ್ತಿದ್ದರು. ರಾಶಿ ತರಕಾರಿ ಅಲ್ಲಿಗೆ ಬರುತ್ತಿತ್ತು. ಮಠದಲ್ಲಿ ಪ್ರತಿನಿತ್ಯ ಜನಸಂದಣಿಯೇ ಇರುತ್ತಿತ್ತು. ಸಂನ್ಯಾಸಿಗಳಷ್ಟೇ ಅಲ್ಲ, ಹೊರಗಡೆಯಿಂದ ಅನೇಕರು ಬರುತ್ತಿದ್ದರು. ಆದ್ದರಿಂದ ಊಟ ದೊಡ್ಡ ಪ್ರಮಾಣದಲ್ಲಿ ತಯಾರಾಗಬೇಕಾಗಿತ್ತು. ಅದೊಂದು ದೊಡ್ಡ ಕೆಲಸವೇ ಆಗಿತ್ತು. ಆದರೆ ಪ್ರೇಮಾನಂದರು ಯುವ ಸಂನ್ಯಾಸಿಗಳೊಂದಿಗೆ ದೇವರ ಬಗ್ಗೆ ಮಾತನಾಡುತ್ತಿದ್ದರು ಮತ್ತು ಅನೇಕ ಕಥೆಗಳನ್ನು ಹೇಳುತ್ತಿದ್ದರು. ಆಗ ಸ್ವಲ್ಪ ಬೈಗಳೂ ಇರುತ್ತಿತ್ತು. ಯಾರಾದರೂ ಆಲೂಗಡ್ಡೆಯ ಸಿಪ್ಪೆಯನ್ನು ದಪ್ಪನಾಗಿ ತೆಗೆದರೆ, ತರಕಾರಿಯನ್ನು ಭಕ್ತರು ಕಷ್ಟಪಟ್ಟು ದುಡಿದು ತಮ್ಮ ಸುಖವನ್ನು ತ್ಯಾಗ ಮಾಡಿ ಮಠಕ್ಕೆ ಕೊಟ್ಟ ಹಣದಿಂದ ತರಲಾಗಿದೆ, ಅದನ್ನು ಸಂನ್ಯಾಸಿಗಳು ವ್ಯರ್ಥ ಮಾಡುವುದು ಯೋಗ್ಯವಲ್ಲ ಎಂದು ಸ್ವಾಮಿಗಳು ನೆನಪು ಮಾಡುತ್ತಿದ್ದರು. ಈ ಪಾಠವನ್ನು ಅವರೆಲ್ಲರೂ ಕಲಿತರು. ನಾನು ತರಕಾರಿ ಬಿಡಿಸುವ ಸಂದರ್ಭಗಳಲ್ಲಿ ಇರಲಿಲ್ಲ. ಆಗ ನಾನು ಮಠದಲ್ಲಿ ಇರಲಿಲ್ಲ. ಆ ಪ್ರಸಂಗವನ್ನು ಎಷ್ಟು ಪರಿಣಾಮಕಾರಿಯಾಗಿ ನನಗೆ ಹೇಳಿರುವರೆಂದರೆ, ಆಲೂಗಡ್ಡೆಯ ಸಿಪ್ಪೆಯನ್ನು ತೆಗೆಯುವಾಗ ನಾನು ಬಹಳ ಜೋಪಾನವಾಗಿ ತೆಳ್ಳಗೆ ತೆಗೆಯುತ್ತೇನೆ. ಅದು ಕೇವಲ ಆಲೂಗಡ್ಡೆಯ ವಿಷಯವಲ್ಲ; ಎಲ್ಲ ವಿಷಯಗಳಲ್ಲಿಯೂ ಹಾಗೆ ಆಲೋಚನೆ ಮಾಡುವಂತೆ ಅವರು ಮಾಡುತ್ತಿದ್ದರು. ಯಾವುದೂ ವ್ಯರ್ಥವಾಗುವಂತಿರಲಿಲ್ಲ. ನಂತರ ನನಗೆ ಅರ್ಥವಾಯಿತು, ಯಾವುದಾದರೂ ಹಾಳಾಗುವುದು, ನಮಗೆ ನಮ್ಮ ಮೇಲೆ ಹತೋಟಿ ಇಲ್ಲದಿರುವುದರಿಂದ ಎಂದು. ನನ್ನ ಚಾಕು ಆಲೂಗಡ್ಡೆ ಅಥವಾ ಮತ್ತಾವುದಾದರೂ ತರಕಾರಿಯನ್ನು ಆಳವಾಗಿ ಕತ್ತರಿಸುವುದು ಏಕೆ? ಏಕೆಂದರೆ ನನ್ನ ಬೆರಳು ಅಥವಾ ಕೈಯ ಮೇಲೆ ನನಗೆ ಹತೋಟಿ ಇಲ್ಲ. ನನ್ನ ಕೈ ಮೇಲೆ ನನಗೆ ಹತೋಟಿ ಇಲ್ಲದಿರುವುದು ಏತಕ್ಕೆ? ಏಕೆಂದರೆ ಮನಸ್ಸಿನ ಮೇಲೆ ಹತೋಟಿ ಇಲ್ಲ. ಮನಸ್ಸಿನ ಮೇಲೆ ನಿಯಂತ್ರಣ ಬಂದರೆ ಎಲ್ಲವೂ ಸರಿ ಹೋಗುವುದು. *(ಮುಂದುವರಿಯುವುದು)*

**'ವಿವೇಕಪ್ರಭ'**ದ ಸಂಪಾದನೆಯಲ್ಲಿ ನಿಯತವಾಗಿ ನೆರವು ನೀಡುತ್ತಿದ್ದ, ಶ್ರದ್ಧಾವಂತ ಭಕ್ತರೂ, ಶ್ರೇಷ್ಠ ವಿದ್ವಾಂಸರೂ ಆಗಿದ್ದ ಶ್ರೀ ಎನ್. ಎಸ್. ಶಾರದಾಪ್ರಸಾದ್ ಅವರು ದೈವಾಧೀನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಅವರಿಗೆ ಪತ್ರಿಕೆಯು ಭಾವಪೂರ್ಣ ಶ್ರದ್ಧಾಂಜಲಿಯನ್ನು ಅರ್ಪಿಸುತ್ತಿದೆ. *–ಸಂ*


***Statement about ownership and other particulars about Viveka Prabha (according to Form IV Rule 8, circulated by Registrar of Newspapers for India)***

| | | |
|---|---|---|
| 1. Place of Publication | : | **Mysore 570 020** |
| 2. Periodicity of Publication | : | **Monthly** |
| 3. Printer's Name | : | **Swami Muktidananda** |
| Nationality | : | **Indian** |
| Address | : | **President, Sri Ramakrishna Ashrama, Yadavagiri, Mysore 570 020** |
| 4. Publisher's Name | : | **Swami Muktidananda** |
| Nationality | : | **Indian** |
| Address | : | **President, Sri Ramakrishna Ashrama, Yadavagiri, Mysore 570 020** |
| 5. Editor's Name | : | **Swami Jnanayogananda** |
| Nationality | : | **Indian** |
| Address | : | **Sri Ramakrishna Ashrama Yadavagiri Mysore 570 020** |
| 6. Name & Addresses of the individuals who own the newspaper and partners or share-holders holding more than 1% of the capital | : | **President, Sri Ramakrishna Ashrama, Yadavagiri Mysore 570 020** |

**I, Swami Muktidananda, hereby declare that the particulars given above are true to the best of my knowledge and belief.**

# ಯೋಗವಾಸಿಷ್ಠದ ಕಥೆಗಳು

ಸ್ವಾಮಿ ವೀರೇಶಾನಂದ

ಕಥಾಗುಚ್ಛ - ೨



### ಶುಕನ ಕಥೆ

**ವಾ**ಲ್ಮೀಕಿಗಳು ಯೋಗವಾಸಿಷ್ಠದ ಕಥೆಯನ್ನು ಮುಂದುವರೆಸುತ್ತಿದ್ದಾರೆ : ಶ್ರೀರಾಮನ ವೈರಾಗ್ಯಪೂರ್ಣವಾದ ಮಾತುಗಳನ್ನು ಕೇಳಿದ ವಿಶ್ವಾಮಿತ್ರ ಮಹರ್ಷಿಗಳು ಹೀಗೆ ಹೇಳಿದರು, ''ರಾಮ, ನಿನ್ನ ಜ್ಞಾನವು ಅನುಪಮವಾದುದು. ಆದರೆ ಶ್ರೀ ಶುಕ ಮಹರ್ಷಿಯಂತೆ ನೀನು ಗುರೂಪದೇಶದ ಮೂಲಕ ನಿನ್ನ ಜ್ಞಾನವನ್ನು ನಿಶ್ಚಿತಗೊಳಿಸಿಕೊಳ್ಳಬೇಕು. ಶುಕನು ಆತ್ಮಜ್ಞಾನಿಯಾಗಿದ್ದನು. ಆದರೂ ತನ್ನ ತಂದೆಯ ಆಣತಿಯಂತೆ ಜನಕ ಮಹಾರಾಜನ ಹತ್ತಿರ ಹೋಗಿ, ತನಗೆ ಗೊತ್ತಿದ್ದುದನ್ನೇ ಅವನಿಂದ ಉಪದೇಶ ಪಡೆದುಕೊಂಡನು. ಆಗ ಮಾತ್ರ ಅವನ ಮನಸ್ಸಿಗೆ ಶಾಂತಿ ದೊರಕಿತು. ಈಗ ನಾನು ಶುಕನ ಕಥೆಯನ್ನು ಹೇಳುತ್ತೇನೆ ಕೇಳು.'' ಆ ಕಥೆ ಹೀಗಿದೆ:

ಶುಕ ವೇದವ್ಯಾಸರ ಸುಪುತ್ರ. ಅವನು ನಿನ್ನಂತೆಯೇ ಪ್ರಪಂಚದ ನಶ್ವರತೆಯ ಬಗ್ಗೆ ಆಳವಾಗಿ ಆಲೋಚಿಸಿ, ಸತ್ಯವನ್ನು ಸಾಕ್ಷಾತ್ಕರಿಸಿಕೊಂಡನು. ಆದರೂ ಅದು ಅವನಾಗಿಯೇ ಗಳಿಸಿಕೊಂಡಿದ್ದ ವಿದ್ಯೆಯಾಗಿತ್ತೇ ಹೊರತು, ಗುರುಮುಖೇನ ಪಡೆದುಕೊಂಡ ಜ್ಞಾನವಾಗಿರಲಿಲ್ಲ. ತನ್ನ ಸಾಕ್ಷಾತ್ಕಾರದ ವಿಷಯದಲ್ಲಿ 'ಇದೇ ಸತ್ಯ' ಎನ್ನುವ ನಿಶ್ಚಿತಬುದ್ಧಿ ಅವನಿಗೆ ಇನ್ನೂ ಉಂಟಾಗಿರಲಿಲ್ಲ. ಈ ಅತಂತ್ರ ಸ್ಥಿತಿಯಲ್ಲಿದ್ದ ಅವನು ಒಂದು ದಿನ ತನ್ನ ತಂದೆಯನ್ನು ಹೀಗೆ ಕೇಳಿಕೊಂಡನು: ''ಭಗವನ್, ಈ ಜಗತ್ತು ಸೃಷ್ಟಿಯಾದದ್ದು ಹೇಗೆ? ಅದು ಅಂತ್ಯಗೊಳ್ಳುವುದು ಯಾವ ರೀತಿ?'' ವೇದವ್ಯಾಸರು ಇದಕ್ಕೆ ಸುದೀರ್ಘವಾದ ಉತ್ತರ ಕೊಟ್ಟರು. ಆದರೂ ಶುಕನಿಗೆ ತೃಪ್ತಿಯಾಗಲಿಲ್ಲ. 'ಈ ವಿಷಯಗಳೆಲ್ಲ ನನಗೀಗಾಗಲೇ ಗೊತ್ತಿದೆಯಲ್ಲ!' ಎಂದುಕೊಂಡನು. ಇವನ ಮನಃಸ್ಥಿತಿಯನ್ನು ಅರ್ಥಮಾಡಿಕೊಂಡ ವೇದವ್ಯಾಸರು ಅವನನ್ನು ಜನಕ ಮಹಾರಾಜನ ಬಳಿಗೆ ಕಳಿಸಿಕೊಟ್ಟರು.

ಶುಕನು ಜನಕನ ಅರಮನೆಗೆ ಬಂದನು. ಆತನ ಆಗಮನದ ವರ್ತಮಾನ ತಿಳಿದಿದ್ದರೂ ಕೂಡ, ಜನಕನು ಒಂದು ವಾರದ ತನಕ ಅವನನ್ನು ಸಂಪೂರ್ಣ ಕಡೆಗಣಿಸಿಬಿಟ್ಟನು. ಶುಕನು ಸಹನೆಯಿಂದ ಹೊರಗಡೆ ಕಾಯುತ್ತ ಇದ್ದನು. ಒಂದು ವಾರ ಕಳೆದ ಮೇಲೆ, ರಾಜನು ಅವನನ್ನು ಆದರದಿಂದ ಬರಮಾಡಿಕೊಂಡನು. ನರ್ತಕಿಯರ ನೃತ್ಯವನ್ನೂ, ಗಾಯಕಿಯರ ಗಾನವನ್ನೂ ಇವನ ಸಲುವಾಗಿಯೇ ಏರ್ಪಡಿಸಿದನು. ಇದು ಕೂಡ ಶುಕನ ಮನಸ್ಸನ್ನು ಸ್ವಲ್ಪವೂ ಪ್ರಕ್ಷುಬ್ಧಗೊಳಿಸಲಿಲ್ಲ. ಬಳಿಕವಷ್ಟೇ ಅವನನ್ನು ಸೇವಕರು ರಾಜನ ಹತ್ತಿರ ಕರೆದುಕೊಂಡುಹೋದರು. ''ನೀನು ಈಗಾಗಲೇ ಸತ್ಯಸಾಕ್ಷಾತ್ಕಾರವನ್ನು ಮಾಡಿಕೊಂಡಿರುವೆ. ನಾನಿನ್ನು ಏನು ತಾನೇ ಬೋಧಿಸಲಿ?'' ಎಂದನು ರಾಜ. ತನ್ನ ತಂದೆಗೆ ಕೇಳಿದ ಪ್ರಶ್ನೆಯನ್ನೇ ಶುಕನು ಜನಕನ ಮುಂದೆ ಪುನರುಚ್ಚರಿಸಿದನು. ಆತನ ತಂದೆಯು ಕೊಟ್ಟ ಉತ್ತರವನ್ನೇ ಜನಕನೂ ನೀಡಿದನು. ಆಗ ಶುಕನು ಹೀಗೆ ಹೇಳಿದನು: ''ಈ ಉತ್ತರ ನನಗೆ ಈಗಾಗಲೇ ಗೊತ್ತಿತ್ತು. ನನ್ನ ತಂದೆ ನನಗೆ ಈ ಹಿಂದೆಯೇ ಹೇಳಿದ್ದಾರೆ. ಇದನ್ನೇ ಶಾಸ್ತ್ರಗಳೂ ಹೇಳುತ್ತವೆ. ಈಗ ನೀನೂ ಈ ಸತ್ಯವನ್ನೇ ಒತ್ತಿ ಹೇಳುತ್ತಿದ್ದೀಯೆ. ಆ ಸತ್ಯ ಇಷ್ಟೇ - ವೈವಿಧ್ಯ (ಸೃಷ್ಟಿ) ಉಂಟಾಗುವುದು ಮಾನಸಿಕ ವೃತ್ತಿಗಳ ದೆಸೆಯಿಂದ. ಮಾನಸಿಕ ವೃತ್ತಿಗಳು ಶಮನಗೊಂಡಾಗ, ವೈವಿಧ್ಯವೂ ಶಮನವಾಗುತ್ತದೆ.''

ಈ ರೀತಿಯಲ್ಲಿ ಶುಕನ ಸಾಕ್ಷಾತ್ಕಾರವು ದೃಢಗೊಂಡಿತು. ನಂತರವಷ್ಟೇ ಅವನು ಶಾಂತಿಯನ್ನು ಪಡೆದುಕೊಂಡನು; ನಿರ್ವಿಕಲ್ಪ ಸಮಾಧಿಯಲ್ಲಿ ನೆಲೆಗೊಂಡನು.

ವಿಶ್ವಾಮಿತ್ರನು ನೆರೆದ ಋಷಿವೃಂದಕ್ಕೆ ಹೇಳಿದನು: ''ಶುಕನಂತೆ ರಾಮನೂ ಉನ್ನತ ಜ್ಞಾನವನ್ನು ಪಡೆದುಕೊಂಡಿದ್ದಾನೆ. ಅವನು ನಿಜವಾಗಿಯೂ ಮುಕ್ತಜೀವಿ. ಅವನಲ್ಲಿ ಕಂಡುಬರುತ್ತಿರುವ ಲಕ್ಷಣಗಳೆಲ್ಲವೂ ಅದನ್ನೇ ಸಾಬೀತುಪಡಿಸುತ್ತಿವೆ. ಶುಕ ಮಹರ್ಷಿಯ ವಿಷಯದಲ್ಲಿ ಜನಕ ಮಹಾರಾಜ ಮಾಡಿದಂತೆ, ರಾಮನ ಜ್ಞಾನವನ್ನು ದೃಢಗೊಳಿಸುವ ಬೋಧನೆಯನ್ನು ವಸಿಷ್ಠರು ಕೈಗೊಳ್ಳಬೇಕು ಎಂದು ನಾನು ಅವರಲ್ಲಿ ಪ್ರಾರ್ಥಿಸುತ್ತೇನೆ. ಅಂಥ ಬೋಧನೆಯು ಒಂದು ದೊಡ್ಡ ಶಾಸ್ತ್ರಗ್ರಂಥವೇ ಆಗುವುದರಲ್ಲಿ ಸಂದೇಹವಿಲ್ಲ. ಮಹಾನ್ ಋಷಿವರೇಣ್ಯರೊಬ್ಬರು ಎಲ್ಲ ಅರ್ಹತೆಗಳುಳ್ಳ ವೈರಾಗ್ಯವಂತ ಶಿಷ್ಯನಿಗೆ ನೀಡುತ್ತಿರುವ ಉಪದೇಶಾಮೃತವೇ ಇದು.''

ವಸಿಷ್ಠರು ಅದಕ್ಕೆ ಒಪ್ಪಿಕೊಂಡರು. ''ರಾಮ, ಸೃಷ್ಟಿಕರ್ತನಾದ ಬ್ರಹ್ಮದೇವನೇ ನನಗೆ ಉಪದೇಶಿಸಿದ ಜ್ಞಾನರಾಶಿಯನ್ನು ನಿನಗೆ ನಾನೀಗ ಬೋಧಿಸುತ್ತಿದ್ದೇನೆ'' ಎಂದನು. ರಾಮನೂ ಹೃತ್ಪೂರ್ವಕವಾಗಿ ಶ್ರವಣ ಮಾಡಲು ಅನುವಾದನು.

**ಸ್ವಪ್ರಯತ್ನ :** ಸ್ವಪ್ರಯತ್ನವೆಂದರೆ ಏನು? ಮಹಾತ್ಮರೊಬ್ಬರ ಉಪದೇಶವನ್ನು ಅನುಸರಿಸಿ ಒಬ್ಬನು ಮಾಡುವ ಮಾನಸಿಕ, ವಾಚಿಕ ಮತ್ತು ಶಾರೀರಕ ಕಾರ್ಯಗಳನ್ನು 'ಸ್ವಪ್ರಯತ್ನ' ಎನ್ನಬಹುದು. ಶಾಸ್ತ್ರಗಳ ಅನುಸಾರವಾಗಿ ಮಾಡದೆ ಇರುವ ಪ್ರಯತ್ನವು ಮೋಹದಿಂದ ಪ್ರೇರೇಪಿತವಾದುದು. ತನ್ನ ಸ್ವಪ್ರಯತ್ನಕ್ಕೆ ಫಲವು ಸಿಕ್ಕದೆ ಇದ್ದರೆ, ಸಾಧಕನು ಸ್ವವಿಮರ್ಶೆ ಮಾಡಿಕೊಳ್ಳಬೇಕು; ಒಡನೆ ತನ್ನನ್ನು ತಿದ್ದಿ ಕೊಳ್ಳಬೇಕು. ನಾವು ಸದ್ಯ ಮಾಡಬೇಕಾದ ಕಾರ್ಯದ ಕಡೆಗೆ ನಮ್ಮ ಗಮನವೆಲ್ಲ ಇರಬೇಕು. ಸ್ವಪ್ರಯತ್ನವನ್ನು ನಿರಂತರವಾಗಿ ಏಕಾಗ್ರಚಿತ್ತದಿಂದ ಕೈಗೊಳ್ಳಬೇಕು. ಸೋಮಾರಿಯಾದ ವ್ಯಕ್ತಿಯು

ಕತ್ತೆಗಿಂತಲೂ ಕಡೆ. ಮೋಕ್ಷ ಮಾರ್ಗದಲ್ಲಿ ಸಾಗುತ್ತಿರುವವನು ಎಂದಿಗೂ ಆಲಸಿಯಾಗಿ ಇರಬಾರದು. ಏಕೆಂದರೆ, ಜೀವನದ ಕ್ಷಣ ಕ್ಷಣವೂ ಕಳೆದುಹೋಗುತ್ತಿದೆ. ಅದನ್ನು ಎಂದಿಗೂ ಮರೆಯಬಾರದು.

ರಾಮಚಂದ್ರ, ಜೀವನದಲ್ಲಿ ಕಷ್ಟ ಬಂದಾಗ ಜನರು ದೈವವನ್ನು ದೂರುತ್ತಾರೆ. ಈ ವಿಷಯದಲ್ಲಿ ನಾನು ಹೇಳುವುದನ್ನು ಕೇಳು. ದೈವ ಅಥವಾ ಅದೃಷ್ಟವೆಂದರೆ ತಾನೇ ಏನು? ಅದು ಭೂತಕಾಲ ದಲ್ಲಿ ಒಬ್ಬನು ಮಾಡಿದ ಕರ್ಮ ಅಥವಾ ಸ್ವಪ್ರಯತ್ನದ ಫಲವೇ ಅಲ್ಲವೇ. ವರ್ತಮಾನ ಕಾಲದಲ್ಲಿ ಅದಕ್ಕಿಂತಲೂ ಚೆನ್ನಾಗಿ ಕಾರ್ಯ ಮಾಡುವ ಅವಕಾಶ ನಮಗೆಲ್ಲ ಇದ್ದೇ ಇದೆ. ಹೀಗಾಗಿ ನಮ್ಮ ಹಿಂದಿನ ಪ್ರಯತ್ನಗಳ ಫಲಸ್ವರೂಪವನ್ನು ಅದೃಷ್ಟ ಅಥವಾ ದೈವದ ಫಲವೆಂದು ಬಗೆಯುವವರು ನಿಜಕ್ಕೂ ಮೂರ್ಖರೇ ಸರಿ. ಹಾಗೆ ನೋಡಿದರೆ, ಸ್ವಪ್ರಯತ್ನವೆನ್ನುವುದು ದೈವೇಚ್ಛೆಗೆ ಇರುವ ಇನ್ನೊಂದು ಹೆಸರೇ ಸರಿ. ನಿಜವಾದ ಸ್ವಪ್ರಯತ್ನವೆನ್ನುವುದು ಯಾವುದು ಗೊತ್ತೆ? ಶಾಸ್ತ್ರಗಳ ಅಧ್ಯಯನ ಮತ್ತು ಮಹಾತ್ಮರ ಸಂಸರ್ಗದಿಂದ ಹೃದಯದಲ್ಲಿ ಉಂಟಾಗುವ ಪರಿಪೂರ್ಣ ಸದ್ಭಾವನೆಯಿಂದ ಮಾಡುವ ಘನ ಕಾರ್ಯ.

ಸ್ವಪ್ರಯತ್ನವು ಮೂರು ಆಧಾರಶಿಲೆಗಳ ಮೇಲೆ ನಿಂತಿದೆ ಎನ್ನ ಬಹುದು: ೧. ಶಾಸ್ತ್ರಗಳ ಆಳವಾದ ಅಧ್ಯಯನ ೨. ಗುರುಗಳ ಉಪ ದೇಶ ಮತ್ತು ೩. ಸ್ವಂತ ಆಸಕ್ತಿ ಮತ್ತು ಪ್ರಯತ್ನ. ಇಲ್ಲಿ ದೈವ ಅಥವಾ ಅದೃಷ್ಟಕ್ಕೆ ಯಾವ ಪಾತ್ರವೂ ಇಲ್ಲ. ಮುಮುಕ್ಷುವು ತನ್ನ ಅಶುದ್ಧ ಮನಸ್ಸನ್ನು ಪರಿಶುದ್ಧವಾದ ಸಾಧನೆಯಲ್ಲಿ, ನಿರಂತರ ಪ್ರಯತ್ನದ ಮೂಲಕ ಹರಿಸಬೇಕು. ಇದೇ ಎಲ್ಲ ಶಾಸ್ತ್ರಗಳ ಸಾರಸರ್ವಸ್ವ.

**ಮೋಕ್ಷದ್ವಾರದ ದ್ವಾರಪಾಲಕರು :** ರಾಮ, ಮೋಕ್ಷದ್ವಾರಕ್ಕೆ ನಾಲ್ಕು ದ್ವಾರಪಾಲಕರು ಇರುತ್ತಾರೆ. ಅವರೆಂದರೆ, ೧. ಆತ್ಮನಿಯಂತ್ರಣ ೨. ವಿಚಾರ ಮಾಡುವ ಶಕ್ತಿ ೩. ಸಂತೃಪ್ತ ಮನೋಭಾವ ಮತ್ತು ೪. ಸತ್ಸಂಗ. ಮುಮುಕ್ಷುವಾದವನು ಇವುಗಳನ್ನು ಬಹಳ ಜಾಗರೂಕತೆ ಯಿಂದ ಬೆಳೆಸಿಕೊಳ್ಳಬೇಕು. ಆಗ ಮಾತ್ರ ಮೋಕ್ಷಕ್ಕೆ ಮಾರ್ಗವು ಸುಗಮವಾಗುತ್ತದೆ.

**೧. ಆತ್ಮನಿಯಂತ್ರಣ :** ಈ ಅಗಾಧ ಸಂಸಾರ ಸಾಗರವನ್ನು ದಾಟಲು, ನಿತ್ಯವೂ ಅವಿಕಾರಿಯೂ ಆದ ತತ್ತ್ವವನ್ನು ಆಶ್ರಯಿಸ ಬೇಕು. ಯಾರ ಮನಸ್ಸು ನಿತ್ಯ ವಸ್ತುವಿನಲ್ಲಿ ನೆಲೆಸಿರುತ್ತದೆಯೋ, ಇದರಿಂದಾಗಿ ಯಾರು ತಮ್ಮ ಇಂದ್ರಿಯಗಳನ್ನು ಸಂಪೂರ್ಣವಾಗಿ ಹತೋಟಿಯಲ್ಲಿ ಇಟ್ಟುಕೊಂಡಿರುತ್ತಾರೋ, ಆ ಮೂಲಕ ಪರಿ ಪೂರ್ಣ ಶಾಂತಭಾವವನ್ನು ತಳೆದಿರುತ್ತಾರೆಯೋ ಅವರೇ ನರೋ ತ್ತಮರು. ಓ ರಾಮ, ಅಂಥವನು ಮಾತ್ರವೇ ಭೋಗ ಮತ್ತು ನೋವುಗಳು ಒಂದಕ್ಕೊಂದನ್ನು ಅಟ್ಟಿಸಿಕೊಂಡು ಹೋಗುವುದನ್ನು ಸ್ಪಷ್ಟವಾಗಿ ಕಾಣುತ್ತಾನೆ; ಒಂದರ ಪ್ರಭಾವವನ್ನು ಮತ್ತೊಂದು ಅಳಿಸಿಹಾಕುವ ಪರಿಯನ್ನು ಅರಿಯುತ್ತಾನೆ. ಇಂಥ ಅರಿವಿನಲ್ಲಿ ಮಾತ್ರವೇ ಸಂಯಮ ಮತ್ತು ಪ್ರಶಾಂತಿಗಳು ಮೈದಳೆದಿರುತ್ತವೆ.

ಓ ರಾಮ, ನಿತ್ಯವಾದ ಬ್ರಹ್ಮತತ್ತ್ವವನ್ನು ಅನುಷ್ಠಾನಗಳಿಂದಾ ಗಲಿ ಅಥವಾ ಆಚರಣೆಗಳಿಂದಾಗಲಿ ಪಡೆದುಕೊಳ್ಳಲು ಸಾಧ್ಯವಿಲ್ಲ. ಅದನ್ನು ಮಾನಸಿಕ ಜಯದಿಂದ ಮಾತ್ರವೇ ಪಡೆದು ಕೊಳ್ಳಲು ಸಾಧ್ಯ. ಆದ್ದರಿಂದ ಎಲ್ಲರೂ – ಅವರು ಯಾವ ಶ್ರೇಣಿಯವರೇ ಆಗಿರಲಿ – ಅರಿವಿನ ಫಲವಾದ ಮನಸ್ಸಿನ ಮೇಲಿನ ಹತೋಟಿ ಮತ್ತು ಸಂಯಮಗಳನ್ನು ಅಭ್ಯಾಸ ಮಾಡಲು ಪ್ರಯತ್ನಿಸಬೇಕು.

ಯಾವಾಗ ಮನಸ್ಸು ಶಾಂತವೂ, ಪರಿಶುದ್ಧವೂ ಹಾಗೂ ಮೋಹ ಮತ್ತು ಭ್ರಮೆಗಳಿಂದ ನಿರ್ಮುಕ್ತವೂ ಆಗಿರುವುದೋ, ಯಾವಾಗ ಅದು ಎಲ್ಲ ರೀತಿಯ ಬಂಧನಗಳಿಂದ ಕಳಚಿಕೊಂಡು ಆಶಾರಹಿತವಾಗಿರುವುದೋ, ಆಗ ಅದು ಯಾವುದಕ್ಕೂ ಯಾಚಿ ಸದು ಮಾತ್ರವಲ್ಲ, ಯಾವುದನ್ನೂ ತಿರಸ್ಕರಿಸದು. ಇದೇ ಮೋಕ್ಷ ದ್ವಾರದ ಮೊದಲನೆಯ ದ್ವಾರಪಾಲಕನಾದ ಆತ್ಮನಿಯಂತ್ರಣ ಅಥವಾ ಮನಸ್ಸಿನ ನಿಯಂತ್ರಣ.

ಓ ರಾಮ, ಜಗತ್ತಿನಲ್ಲಿ ಯಾವ ಸಾಧನೆಯೂ ಆತ್ಮನಿಯಂತ್ರಣ ವಿಲ್ಲದೆ ಸಾಧ್ಯವಾಗದು. ಆತ್ಮನಿಯಂತ್ರಣದಿಂದ ಒದಗಿಬರುವ ಸ್ವಾನಂದವು ವರ್ಣನಾತೀತವಾದುದು. ಅಂಥ ವ್ಯಕ್ತಿಯಲ್ಲಿ ಎಲ್ಲರೂ ತಾವಾಗಿಯೇ ವಿಶ್ವಾಸವಿಡುತ್ತಾರೆ. ಆತನನ್ನು ಯಾರೂ ದ್ವೇಷಿಸರು. ಎಲ್ಲ ರೀತಿಯ ಮಾನಸಿಕ ಮತ್ತು ದೈಹಿಕ ಜಾಡ್ಯಗಳಿಗೆ ಆತ್ಮ ನಿಯಂತ್ರಣವೇ ಪರಿಣಾಮಕಾರಿ ಮದ್ದು. ಆತ್ಮನಿಯಂತ್ರಣದಿಂದ ಉಣ್ಣುವ ಅನ್ನವೂ ರುಚಿಕರವಾಗಿ ಪರಿಣಮಿಸುತ್ತದೆ; ಇಲ್ಲದಿದ್ದರೆ ರುಚಿಯಾದ ಆಹಾರವೂ ಕಹಿಯಾಗುತ್ತದೆ.

ಸುಖಕರವಾದ ಅಥವಾ ದುಃಖಕರವಾದ ವಿಷಯವಸ್ತುಗಳ ಭೋಗದ ಸಮಯದಲ್ಲಿ ಯಾರ ಮನಸ್ಸು ಹರ್ಷವಾಗಲಿ ಅಥವಾ ದುಃಖವನ್ನಾಗಿ ಹೊಂದುವುದಿಲ್ಲವೋ ಅವನೇ ಆತ್ಮನಿಯಂತ್ರಣ ವುಳ್ಳವನು. ಅವನು ಎಲ್ಲ ಜೀವಿಗಳನ್ನೂ ಸಮಬುದ್ಧಿಯಿಂದ ಕಾಣು ತ್ತಾನೆ; ಸುಖ ಅಥವಾ ದುಃಖದ ಸಂವೇದನೆಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತಾನೆ; ಗಾಢನಿದ್ರೆಯಲ್ಲಿರುವವನು ಹರ್ಷವನ್ನಾ ಗಲಿ, ದ್ವೇಷವನ್ನಾಗಲಿ ಹೇಗೆ ಹೊಂದುವುದಿಲ್ಲವೋ ಹಾಗೆ ಇವನು ಕೂಡ ಯಾವುದರಿಂದಲೂ ಪ್ರಭಾವಿತನಾಗುವುದಿಲ್ಲ.

**೨. ವಿಚಾರ:** ಮೋಕ್ಷದ್ವಾರದ ಎರಡನೆಯ ದ್ವಾರಪಾಲಕ ನೆಂದರೆ ವಿಚಾರ. ವಿಚಾರ ಮಾಡಲು ಪರಿಶುದ್ಧ ಬುದ್ಧಿ ಆವಶ್ಯಕ. ಬುದ್ಧಿ ಪರಿಶುದ್ಧವಾಗಲು ಶಾಸ್ತ್ರಗಳ ಗಾಢ ಅಧ್ಯಯನ ಬೇಕೇಬೇಕು. ಹಾಗೆಯೇ ವಿಚಾರವನ್ನು ಅನವರತ ಮಾಡುತ್ತಲೇ ಇರಬೇಕು. ಈ ಬಗೆಯ ವಿಚಾರದಿಂದ ಬುದ್ಧಿಯು ಸೂಕ್ಷ್ಮವಾಗುತ್ತದೆ. ಆ ಮೂಲಕ ಪರತತ್ತ್ವವನ್ನು ಅರಿತುಕೊಳ್ಳಲು ಸಾಧ್ಯ. ಹೀಗಾಗಿ ಸಂಸಾರವೆಂಬ ಘೋರವಾದ ರೋಗಕ್ಕೆ ಔಷಧಪ್ರಾಯವಾದುದು ವಿಚಾರ. ವಿಚಾರ ಶಕ್ತಿಯು ಯಾರಲ್ಲಿ ಉತ್ತೇಜನಗೊಂಡಿರುತ್ತದೆಯೋ, ಅವರು ತಮ್ಮ ಸಮೀಪಕ್ಕೆ ಬಂದವರನ್ನೆಲ್ಲ ತಮ್ಮ ಅರಿವಿನಿಂದ ಬೆಳಕಿನಿಂದ ಬೆಳಗು ತ್ತಾರೆ. ಓ ರಾಮ, ವಿಚಾರದ ಜ್ಯೋತಿಯಲ್ಲಿ ನಿತ್ಯವೂ ನಿರ್ವಿಕಾರವೂ ಆದ ಸತ್ಯತತ್ತ್ವದ ಸಾಕ್ಷಾತ್ಕಾರವು ಅಂತರ್ಗತವಾಗಿರುತ್ತದೆ. ವಿಚಾರ

ವಂತನು ಮೋಹ ಮತ್ತು ಆಸಕ್ತಿಗಳಿಂದ ಮುಕ್ತನಾಗಿರುತ್ತಾನೆ; ಅಂಥವನು ಕಾರ್ಯವೆಸಗುತ್ತಿದ್ದರೂ, ನಿಷ್ಕಾಮಿಯಾಗಿರುತ್ತಾನೆ.

**೩. ಸಂತೃಪ್ತಿ:** ಸಂತೃಪ್ತಿಯೆನ್ನುವುದು ಮೋಕ್ಷದ್ವಾರದ ಇನ್ನೊಬ್ಬ ದ್ವಾರಪಾಲಕ. ಸಂತೃಪ್ತಿಯ ಅಮೃತಪಾನವನ್ನು ಮಾಡಿದವನು ಯಾವ ಐಂದ್ರಿಯ ಸುಖಭೋಗಗಳಿಗೂ ಹಾತೊರೆಯುವುದಿಲ್ಲ. ಎಲ್ಲ ಪಾಪಗಳನ್ನು ವಿನಾಶಮಾಡುವ ಸಂತೃಪ್ತಿಗಿಂತ ಮಧುರವಾದ ಸುಖಾನುಭವವು ಈ ಜಗತ್ತಿನಲ್ಲಿ ಯಾವುದೂ ಇಲ್ಲವೆನ್ನಬೇಕು.

ಸಂತೃಪ್ತಿಯೆಂದರೆ ಏನು? ಯಾವುದನ್ನೂ ಆಶಿಸದೆ, ಬಂದೊದಗದೆ ಇರುವ ಸಂಗತಿಗಳ ಮೇಲಿನ ಆಸಕ್ತಿಯನ್ನು ಸಂಪೂರ್ಣ ತ್ಯಜಿಸುವುದು ಮತ್ತು ಅದೇ ಸಮಯದಲ್ಲಿ , ಅಯಾಚಿತವಾಗಿ ಬಂದೊದಗಿದ ಸಂಗತಿಗಳಲ್ಲಿ ತೃಪ್ತನಾಗಿರುವುದು; ಎರಡೂ ಸಂದರ್ಭಗಳಲ್ಲಿ ಖಿನ್ನತೆಯನ್ನಾಗಲಿ, ಹರ್ಷವನ್ನಾಗಲಿ ಹೊಂದದೆ ಸಮದೃಷ್ಟಿಯನ್ನು ತಳೆಯುವುದು. ಇದೇ ಸಂತೃಪ್ತಿ. ಒಬ್ಬನು ಆತ್ಮಾರಾಮನಾಗುವ ತನಕ, ಸಂಕಷ್ಟದಲ್ಲಿ ಸಿಲುಕಿ ಒದ್ದಾಡುತ್ತಲೇ ಇರುತ್ತಾನೆ. ಸಂತೃಪ್ತಿಯ ಉಗಮದಿಂದ, ಹೃದಯವು ಪರಿಪೂತ ವಾಗುತ್ತದೆ. ಏನನ್ನೂ ಇಟ್ಟುಕೊಳ್ಳದ ಸಂತೃಪ್ತ ಮಾನವನು ಇಡೀ ಪ್ರಪಂಚವನ್ನೇ ಆಳುತ್ತಾನೆ.

**೪. ಸತ್ಸಂಗ :** ಸಾಧುಸಂತರ, ಮಹಾತ್ಮರ ಮತ್ತು ಜ್ಞಾನಿಗಳ ಸಹವಾಸವೇ ಸತ್ಸಂಗ ಎನ್ನಿಸಿಕೊಳ್ಳುತ್ತದೆ. ಇದು ಮೋಕ್ಷದ್ವಾರದ ಇನ್ನೊಂದು ದ್ವಾರಪಾಲಕನಂತೆ ಇದೆ. ಸತ್ಸಂಗವು ಮನುಷ್ಯನ ಬುದ್ಧಿಯನ್ನು ವಿಕಾಸಮಾಡುತ್ತದೆ; ಅವನ ಅಜ್ಞಾನವನ್ನು ಮತ್ತು ಮಾನಸಿಕ ವ್ಯಥೆಯನ್ನು ನಾಶಮಾಡುತ್ತದೆ. ಏನೇ ಆಗಲಿ, ಯಾವುದೇ ಆಪತ್ತುಗಳು ಒದಗಿಬರಲಿ, ಅದೆಷ್ಟೇ ಅಡೆತಡೆಗಳು ಉಂಟಾಗಲಿ, ಸತ್ಸಂಗವನ್ನು ಮಾತ್ರ ಯಾವ ಕಾರಣಕ್ಕೂ ಬಿಡಬಾರದು. ಜೀವನ ಮಾರ್ಗಕ್ಕೆ ದಾರಿದೀಪದಂತೆ ಇರುವುದು ಈ ಸತ್ಸಂಗ; ದಾನ, ತಪಸ್ಸು, ತೀರ್ಥಯಾತ್ರೆ ಮತ್ತು ಧರ್ಮಾನುಷ್ಠಾನಗಳಿಗಿಂತ ಅತ್ಯುತ್ತಮವಾದ ಆಧ್ಯಾತ್ಮಿಕ ಸಾಧನೆ ಈ ಸತ್ಸಂಗ.

ನಮ್ಮ ಕೈಲಾದಷ್ಟು ಜ್ಞಾನಿಗಳಾದ ಮಹಾತ್ಮರ ಸೇವೆ ಮಾಡಬೇಕು. ಆ ಮೂಲಕ ನಮ್ಮ ಹೃದಯದಲ್ಲಿ ಕಗ್ಗತ್ತಲಿನಂತೆ ಹಬ್ಬಿರುವ ಅಜ್ಞಾನವು ಕರಗಿಹೋಗುತ್ತದೆ. ಮಹಾತ್ಮರನ್ನು ಅಗೌರವದಿಂದ ಕಾಣುವವರು ಮಹಾನ್ ಸಂಕಷ್ಟಕ್ಕೆ ಒಳಗಾಗುತ್ತಾರೆ.

ಇವು ನಾಲ್ಕು – ಆತ್ಮನಿಯಂತ್ರಣ, ವಿಚಾರ, ಸಂತೃಪ್ತಿ ಮತ್ತು ಸತ್ಸಂಗಗಳು ಸಂಸಾರ ಸಾಗರವನ್ನು ದಾಟುವುದಕ್ಕೆ ಖಚಿತವಾದ ಮಾರ್ಗಗಳಾಗಿವೆ. ಇವುಗಳಲ್ಲಿ ಸಂತೃಪ್ತಿಯು ಉತ್ಕೃಷ್ಟವಾದ ಸಿದ್ಧಿ. ಸತ್ಸಂಗವು ಧ್ಯೇಯಸಾಧನೆಗೆ ಪರಮೋತ್ತಮವಾದ ಸಹಕಾರಿ ಸಾಧನ. ವಿಚಾರ ಮನೋಭಾವವೇ ಬಹು ದೊಡ್ಡ ಅರಿವು ಮತ್ತು ಆತ್ಮನಿಯಂತ್ರಣವೇ ಪರಮಾನಂದ. ಆದ್ದರಿಂದ ಓ ರಾಮ, ಈ ಉದಾತ್ತ ಗುಣಗಳನ್ನು ಮೈಗೂಡಿಸಿಕೊಳ್ಳಲು ಎಲ್ಲ ರೀತಿಯಿಂದಲೂ ಪ್ರಯತ್ನಿಸು.

## ಯೋಗವಾಸಿಷ್ಠದ ವಿಷಯವಸ್ತು

ವಸಿಷ್ಠರು ತಮ್ಮ ಉಪದೇಶವನ್ನು ಮುಂದುವರೆಸುತ್ತಾರೆ:

ರಾಮ, ಈ ಶಾಸ್ತ್ರವು ೩೨,೦೦೦ ಶ್ಲೋಕಗಳನ್ನು ಒಳಗೊಂಡಿದೆ. ಇದರ ಮೊದಲ ಭಾಗವನ್ನು **ವೈರಾಗ್ಯ ಪ್ರಕರಣ** ಎನ್ನುತ್ತಾರೆ. ಇದು ಮಾನವ ಜೀವನದ ನಿಜವಾದ ಸ್ವರೂಪವನ್ನು ಬಣ್ಣಿಸುತ್ತದೆ. ಇದನ್ನು ಶ್ರದ್ಧೆಯಿಂದ ಅಧ್ಯಯನ ಮಾಡುವುದರಿಂದ ಹೃದಯ ಪರಿಶುದ್ಧವಾಗುತ್ತದೆ. ಈ ಅಧ್ಯಾಯ ೧೫೦೦ ಶ್ಲೋಕಗಳನ್ನು ಒಳಗೊಂಡಿದೆ.

ಮುಂದಿನ ಭಾಗವನ್ನು **ಮುಮುಕ್ಷು ವ್ಯವಹಾರ ಪ್ರಕರಣ** ಎಂದು ಕರೆಯುತ್ತಾರೆ. ಸಾಧನೆಯಲ್ಲಿ ಪ್ರಾಮಾಣಿಕವಾಗಿ ತೊಡಗಿಸಿಕೊಂಡ ಸಾಧಕನ ಲಕ್ಷಣಗಳನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ವರ್ಣಿಸಲಾಗಿದೆ. ಇದರಲ್ಲಿ ೧೦೦೦ ಶ್ಲೋಕಗಳಿವೆ.

ತದನಂತರ ಬರುವುದೇ **ಉತ್ಪತ್ತಿ ಪ್ರಕರಣ.** ಇದು ಸೃಷ್ಟಿಕ್ರಿಯೆಗೆ ಸಂಬಂಧಿಸಿದ ಅಧ್ಯಾಯ. ಹಲವಾರು ಪ್ರೇರಣಾದಾಯಕ ಕಥೆಗಳನ್ನು ಈ ಅಧ್ಯಾಯದಲ್ಲಿ ಕಾಣಬಹುದು. ಅವೆಲ್ಲವೂ ಪರಿಪೂರ್ಣ ಸತ್ಯವನ್ನು ಚೆನ್ನಾಗಿ ಚಿತ್ರಿಸುತ್ತವೆ. ಈ ಜಗತ್ತು ಯಾವತ್ತೂ ಸೃಷ್ಟಿಯಾಗಿಯೇ ಇಲ್ಲ; ಆದರೆ ಸೃಷ್ಟಿಯಾದ ಹಾಗೆ ಕಾಣಿಸಿಕೊಳ್ಳುತ್ತದೆ, ಅಷ್ಟೇ. ಇದೆಲ್ಲ 'ನಾನು' 'ನೀನು' ಎಂಬ ಎರಡು ಮಿಥ್ಯಾ ಭಾವನೆಗಳ ಆಟವಷ್ಟೇ. ಇದೇ ಸತ್ಯ. ಈ ಅಧ್ಯಾಯದಲ್ಲಿ ೭೦೦೦ ಶ್ಲೋಕಗಳಿವೆ.

ಮುಂದಿನ ಅಧ್ಯಾಯವನ್ನು **ಸ್ಥಿತಿ ಪ್ರಕರಣ** ಎಂದು ಹೆಸರಿಸಲಾಗಿದೆ. ಈ ಜಗತ್ತಿನ ಅಸ್ತಿತ್ವದ ಬಗ್ಗೆ ನೈಜ ಅರಿವನ್ನು ಉಂಟುಮಾಡುವುದೇ ಈ ಅಧ್ಯಾಯದ ಉದ್ದೇಶ. ಇಲ್ಲೂ ಕೂಡ ಈ ಸತ್ಯವನ್ನು ಕಥೆಗಳ ಮೂಲಕ ವಿವರಿಸಲಾಗಿದೆ. ಜಗತ್ತು ಬರೀ ತೋರಿಕೆ ಮಾತ್ರ. ಅದಕ್ಕೆ ಆಧಾರವಾಗಿರುವ ಬ್ರಹ್ಮತತ್ತ್ವವೇ ಸತ್ಯವಾದುದು. ಇದನ್ನು ಇಲ್ಲಿ ಮುಖ್ಯವಾಗಿ ಬಿಂಬಿಸಲಾಗಿದೆ.

ಐದನೆಯ ಅಧ್ಯಾಯದ ಹೆಸರು **ಉಪಶಾಂತಿ ಪ್ರಕರಣ** ಎಂದು. ಪ್ರಲಯ ಕಾಲದಲ್ಲಿ ಈ ಜಗತ್ತು ಉಡುಗಿಹೋಗುತ್ತದೆ. ಇದರ ವಿವರ ಇಲ್ಲಿದೆ. ಇದನ್ನು ಆಲಿಸುವುದರಿಂದ ಜಗತ್ತಿನ ಬಗೆಗಿನ ನಮ್ಮ ಮೋಹ ಕಳೆದುಹೋಗುತ್ತದೆ; ವಿವೇಕ ಜಾಗೃತವಾಗುತ್ತದೆ. ಈ ಅಧ್ಯಾಯದಲ್ಲಿ ೫೦೦೦ ಶ್ಲೋಕಗಳಿವೆ.

ಕಡೆಯ ಅಧ್ಯಾಯವಾದ **ನಿರ್ವಾಣ ಪ್ರಕರಣವು** ಬಹಳ ವಿಸ್ತಾರವಾದುದು. ೧೪,೫೦೦ ಶ್ಲೋಕಗಳಿರುವ ಈ ಅಧ್ಯಾಯದ ವಿಷಯ ಮೋಕ್ಷದ ವಿವರಣೆ. ಇದರ ಅಧ್ಯಯನವನ್ನು ಮಾಡಿ ಚೆನ್ನಾಗಿ ಅರಿತುಕೊಳ್ಳುವುದರಿಂದ ಮಾನವನಲ್ಲಿರುವ ಮೂಲಭೂತ ಅಜ್ಞಾನ ನಾಶವಾಗುವುದು; ಎಲ್ಲ ರೀತಿಯ ಮೋಹ ಮತ್ತು ಭ್ರಾಂತಿಗಳು ಅವಸಾನಗೊಳ್ಳುವವು. ಅಂಥ ವ್ಯಕ್ತಿಯು ಭೌತಿಕ ದೇಹದಲ್ಲಿದ್ದರೂ ಕೂಡ ಅದರಿಂದ ಮುಕ್ತನಾಗಿರುತ್ತಾನೆ; ಎಲ್ಲ ರೀತಿಯ ಆಶೆಗಳು ಮತ್ತು ಆಕಾಂಕ್ಷೆಗಳನ್ನು ಮೀರಿಹೋಗಿರುತ್ತಾನೆ. ಅವನು ಸಂಸಾರವಿಹೀನನಾಗಿ ಬಿಡುತ್ತಾನೆ; ಅನಂತದೊಡನೆ ಐಕಾತ್ಮ್ಯವನ್ನು ಹೊಂದುತ್ತಾನೆ. 

**ಪುಸ್ತಕ ಪರಿಚಯ**

# ನಿಗೂಢ ಭಾರತದಲ್ಲೊಂದು ಹುಡುಕಾಟ

ಇಂಗ್ಲಿಷ್ ಮೂಲ : **ಪಾಲ್ ಬ್ರಂಟನ್** ಕನ್ನಡ ಅನುವಾದ : **ಗಿರಿಜಾ ಶಾಸ್ತ್ರೀ**
ಪ್ರಕಾಶಕರು : **ರಾಷ್ಟ್ರೋತ್ಥಾನ ಸಾಹಿತ್ಯ , 'ಕೇಶವ ಶಿಲ್ಪ', ಕೆಂಪೇಗೌಡನಗರ, ಬೆಂಗಳೂರು – ೫೬೦೦೧೯**
ಪುಟಗಳು : xviii+೪೧೪ ಬೆಲೆ : ₹ ೨೫೦

**ಅ**ಂತರೀಕ್ಷಣೆಯನ್ನು ಏಕೈಕ ಮಾರ್ಗವಾಗಿ ಹೇಳುವ ರಮಣ ಮಹರ್ಷಿಗಳನ್ನು ವಿದೇಶೀಯರಿಗೆ ಪರಿಚಯಿಸಿದವರು ಪಾಲ್ ಬ್ರಂಟನ್. ೧೯೩೪ರಲ್ಲಿ ಪ್ರಕಟವಾದ ಪಾಲ್ ಬ್ರಂಟನ್ ಅವರ ಅಧ್ಯಾತ್ಮಕ್ಕಾಗಿ ಪಶ್ಚಿಮದ ಹುಡುಕಾಟವನ್ನು ವಿವರಿಸುವ ಕೃತಿಯ ಅನುವಾದ 'ನಿಗೂಢ ಭಾರತದಲ್ಲೊಂದು ಹುಡುಕಾಟ' ೮೦ ವರ್ಷಗಳ ಅನಂತರ ಪ್ರಕಟವಾಗಿದ್ದರೂ, ಈಗಲೂ ಕುತೂಹಲವನ್ನು ಹುಟ್ಟಿಸುತ್ತದೆ.

ಮೊದಲ ಹಾಗೂ ಕೊನೆಯ ಅಧ್ಯಾಯಗಳಲ್ಲಿ ಬ್ರಂಟನ್ ಮುಖ್ಯವಾದ ಆಧ್ಯಾತ್ಮಿಕ ಪ್ರಶ್ನೆಗಳನ್ನು ಸೂಚಿಸಿದ್ದು, ಇವುಗಳ ಪರಿಹಾರಕ್ಕಾಗಿನ ಹುಡುಕಾಟದಲ್ಲಿ ನಾವೂ ಅವರಂತೆಯೇ ವಿನೀತರಾಗುತ್ತೇವೆ. ಋಷಿಗಳು, ಅವಧೂತರು, ಯೋಗಿಗಳಂತಹ ನಿಗೂಢ ವ್ಯಕ್ತಿಗಳ ಬಗೆಗಿನ ಕತೆಗಳು ಸತ್ಯವೆ? ಆ ಶಕ್ತಿಯನ್ನು ಒದಗಿಸುವ ಪ್ರಾಚೀನ ಜ್ಞಾನರಾಶಿಯು ಭಾರತದಲ್ಲಿತ್ತೆ? ಈ ಬಗ್ಗೆ ತಮ್ಮ ಶೋಧನಾಯಾತ್ರೆ, ಅನುಭವಗಳನ್ನು ಲೇಖಕರು ಸ್ವಾರಸ್ಯವಾಗಿ ವಿವರಿಸಿದ್ದಾರೆ. ಯಾವುದನ್ನೂ ಸೂಕ್ತ ಸಾಕ್ಷ್ಯಾಧಾರಗಳಿಲ್ಲದೆ, ಪ್ರಮಾಣವಿಲ್ಲದೆ ನಂಬದ ಅಜ್ಞೇಯತಾವಾದಿಯೊಬ್ಬ ಯಾವ ವಿದ್ವಾಂಸರೊಂದಿಗೂ ಚರ್ಚಿಸದೆಯೆ, ಕೇವಲ ತನ್ನನ್ನು ಮೂಕವಿಸ್ಮಿತನನ್ನಾಗಿಸಿದ ಅನುಭವಗಳಿಂದಾಗಿ ಕಳೆದುಹೋಗಿದ್ದ ತನ್ನ ಶ್ರದ್ಧೆಯನ್ನು ಮರಳಿ ಪಡೆದುದು ಸಾಮಾನ್ಯ ಸಂಗತಿಯೇನಲ್ಲ. ಆದರೆ ಅದು ಬಹಳ ಕಾಲ ಇರುವುದಿಲ್ಲ ಎಂದು ಅಂದು ಲೇಖಕರು ಹೇಳುವ ಉಪಭೋಗವಾದಿ ಮಾನಸಿಕತೆಯು ಇಂದು ಇನ್ನೂ ಹೆಚ್ಚಾಗುತ್ತಿರುವುದನ್ನೂ, ವೈಜ್ಞಾನಿಕ ಸಂಶೋಧನೆಗಳು ನಿಸರ್ಗದ ನಿಗೂಢ ತತ್ತ್ವಗಳನ್ನು ಕಂಡುಕೊಳ್ಳಲು ಸಾಧ್ಯವಾಗದಿರುವುದನ್ನೂ ಕಂಡರೆ, ಹೆಚ್ಚು ಜನ ಇಂತಹ ಹುಡುಕುವಿಕೆಯಲ್ಲಿ ತೊಡಗುವರು ಎಂದು ಅನ್ನಿಸದು. ಕೊನೆಯ ಅಧ್ಯಾಯದಲ್ಲಿ ರಮಣರ ಪರಂಪರೆಯ ಮುಂದುವರಿಕೆಯಾಗಿ ಯೋಗಿ ರಾಮಯ್ಯನವರನ್ನು ಚಿತ್ರಿಸಿ, ಭರವಸೆ ತಂದರೂ, 'ಮನುಷ್ಯನು ತನ್ನ ಅಂತರಾತ್ಮವನ್ನು ಅರಿತುಕೊಂಡಾಗಲೇ ತನ್ನ ದುಃಖಗಳನ್ನೂ ಕೂಡ ದಿವ್ಯತೆಯೆಂದೇ ಭಾವಿಸಲು ಸಾಧ್ಯವಾಗುವುದು' ಎಂಬ ಲೇಖಕರ ಅನುಭವವನ್ನು ನಂಬಲು ಕಷ್ಟವಾಗುತ್ತದೆ. ಯೋಚನೆಗಳನ್ನು ನಿಲ್ಲಿಸಲು ಪ್ರಯತ್ನಿಸು ಎಂದು ಎಂದೂ ಮಹರ್ಷಿಗಳು ಹೇಳಿರಲಿಲ್ಲ. ಬದಲಾಗಿ ಭಾವನೆಗಳ ಮೂಲಕ್ಕೆ ಹೋದಾಗ ನಿಜಾತ್ಮವು ತಾನಾಗಿ ಹೊರಬಂದು, ಭಾವನೆಗಳು ತಾನಾಗಿ ಅಳಿದುಹೋಗುತ್ತವೆ ಎನ್ನುತ್ತಾರೆ. ತಮ್ಮ ಅನುಭವದ ಮೂಸೆಯಿಂದ ಹೊರತೆಗೆದ ಅರಿವಿನ ತುಣುಕುಗಳನ್ನು ಲೇಖಕರು 'ವಿಸ್ಮೃತ ಸತ್ಯದ ಶಿಲಾಫಲಕಗಳ'ಲ್ಲಿ ಸೊಗಸಾಗಿ ಸಂಗ್ರಹಿಸಿ ನೀಡಿದ್ದಾರೆ. ಓದಿನಲ್ಲಿ ಆಸಕ್ತಿ ಇಲ್ಲದ ಘಟಿಂಗ ಹುಡುಗನೊಬ್ಬ 'ಭಾರತ' ಎಂಬ ಶಬ್ದದಿಂದ ಆಕರ್ಷಿತನಾಗಿ, ನಕಾಶೆಯಲ್ಲಿನ ದೇಶವನ್ನು ನೋಡಿಯೆ ಮೈ ನವಿರೆದ್ದು, ಆಸಕ್ತಿ ಬೆಳೆಸಿಕೊಳ್ಳುವುದು, ಜೀವನದ ಹಲವು ವರ್ಷಗಳನ್ನು ಭಾರತ ಹಾಗೂ ಏಷ್ಯದ ಕೆಲವು ರಾಷ್ಟ್ರಗಳ ಒಳನೋಟ ಪಡೆಯುವ ಹುಡುಕಾಟದಲ್ಲಿ ಕಳೆಯುವುದು ಆಶ್ಚರ್ಯಕರವಾಗಿದೆ.

ಸಂತೆಗೆ ಹೋಗಿ ಎಲ್ಲವನ್ನೂ ನೋಡಿ, ಕೊನೆಗೆ ತಮಗೆ ಬೇಕಾದ ಪದಾರ್ಥವನ್ನು ಸರಿಯಾದ ಬೆಲೆಗೆ ಯಾರು ಮಾರುತ್ತಿರುತ್ತಾರೋ ಅವರಲ್ಲಿಗೆ ತೆರಳಿ ಕೊಂಡುಕೊಂಡು ಮನೆಗೆ ಹೋಗುವಂತೆ ಬ್ರಂಟನ್ ಅವರ ಹುಡುಕಾಟ. ಈಜಿಪ್ಟ್‌ನ ಮಾಂತ್ರಿಕನಿಂದ ಮೊದಲು ಮಾಡಿ, ರಮಣರನ್ನೂ ಸೇರಿಸಿ, ವಿವಿಧ ವ್ಯಕ್ತಿಗಳನ್ನು ಭೇಟಿಯಾಗಿ ಅನಂತರ ಅಂತಿಮವಾಗಿ ರಮಣರನ್ನು ಆಶ್ರಯಿಸುತ್ತಾರೆ. ಅನೇಕರನ್ನು ಭೇಟಿಯಾಗಿದ್ದರೂ, ಪರಿಗಣನೆಗೆ ಯೋಗ್ಯರ ಬಗ್ಗೆ ಮಾತ್ರ ಬರೆದಿದ್ದೇನೆಂದು ಹೇಳಿಕೊಂಡಿರುವುದರಿಂದ, ಇವರೆಲ್ಲ ಪ್ರಾತಿನಿಧಿಕ ವ್ಯಕ್ತಿಗಳೆನ್ನಬಹುದು.

ಕೊನೆಯಲ್ಲಿ ದಾರಿಯಲ್ಲಿ ಸಿಕ್ಕ ಯೋಗಿ ಚಂಡೀದಾಸ್ ಲೇಖಕರು ಈ ಹಿಂದೆ ನೋಡಿ, ಪ್ರಭಾವಿತರಾಗಿದ್ದ ಶ್ರೀರಾಮಕೃಷ್ಣ ಪರಮಹಂಸರ ಶಿಷ್ಯ ಮಾಸ್ಟರ್ ಮಹಾಶಯರ ಬಗ್ಗೆ ವಿಚಾರಿಸಿ, ಅವರನ್ನು ಮುಂದೆ ನೋಡಲಾರಿರಿ ಎಂದು ಹೇಳುತ್ತಾರೆ. ಭವಿಷ್ಯದ ಬಗ್ಗೆ ಹೇಳಲು ಒತ್ತಾಯಿಸಿದಾಗ, ಎಲ್ಲಿಂದ ಯಾತ್ರೆ ಪ್ರಾರಂಭಿಸಿದಿರೋ ಅಲ್ಲಿಗೆ ಹೋಗಿ ಎಂದು ಸಲಹೆ ನೀಡಿ, ನೀವು ದೇಶ ಬಿಟ್ಟೊಡನೆಯೇ ತೀವ್ರ ಕಾಯಿಲೆ ಬೀಳುವಿರಿ, ಸಾಯದೆ ನಿಮ್ಮೊಂದಿಗೆ ಋಣಾನುಬಂಧವಿರುವ ಸಂನ್ಯಾಸಿಯೊಬ್ಬರ ಬಳಿ ಬರುವಿರಿ, ಮತ್ತೂ ಮೂರು ಬಾರಿ ಬರುವಿರಿ ಎನ್ನುತ್ತಾರೆ. ಮುಂಬಯಿಗೆ ಹೋಗಿ, ಹಿಂದಿರುಗುವ ಹಡಗಿನ ಟಿಕೆಟ್ ಅನ್ನೂ ಕೊಂಡಮೇಲೆ, ಅಕಸ್ಮಿಕವಾಗಿ ಬಂದ ಮದ್ರಾಸಿನ ವೆಂಕಟರಮಣಿಯ ಕಾಗದ ನೋಡಿ, ರಮಣರ ಬಳಿ ಮತ್ತೆ ಹೋಗುತ್ತಾರೆ.

ರಮಣರ ಜತೆಗಿನ ಎರಡನೆಯ ಭೇಟಿಯಲ್ಲಿ ಪರಿಚಯ ಮಾಡಿಕೊಳ್ಳುವ ಮನೋಭಾವವಿರದೆ ಪೂರ್ತಿಯಾಗಿ ಒಪ್ಪಿ ಅನುಯಾಯಿಯಾಗುವ ವಿವರಗಳಿವೆ. ನಿರಾಶಾವಾದದ ಸ್ಥಿತಿಯಲ್ಲಿ

'ನೀವು ತೋರಿಸುತ್ತಿರುವ ಹಾದಿಯಲ್ಲಿ ಕಷ್ಟಗಳು ತುಂಬಿವೆ. ನನಗೆ ನನ್ನ ಸ್ವಂತ ದೌರ್ಬಲ್ಯಗಳ ಅರಿವಿದೆ' ಎಂದಾಗ, ಮಹರ್ಷಿಗಳು 'ತಮ್ಮನ್ನು ತಾವು ಅಡ್ಡಿಪಡಿಸಿಕೊಳ್ಳಲು ಇದು ಉತ್ತಮ ಮಾರ್ಗ. ಸೋಲಿನ ಭಯದಿಂದ ಮತ್ತು ಸ್ವಂತ ಸೋಲಿನ ಭಾವನೆಯಿಂದ ಮನಸ್ಸನ್ನು ಹೊರೆಯಾಗಿಸಿಕೊಳ್ಳುವುದು ತಪ್ಪು ಮಾರ್ಗ. ತಾನು ಪ್ರಾಕೃತಿಕವಾಗಿ ಅಶಕ್ತ, ಕೆಟ್ಟವನು ಎಂದೆಲ್ಲಾ ಭಾವಿಸುವುದು ಮನುಷ್ಯನ ದೊಡ್ಡ ತಪ್ಪು. ಪ್ರತಿಯೊಬ್ಬನೂ ದಿವ್ಯಾತ್ಮನೇ, ತನ್ನ ನಿಜವಾದ ಪ್ರಕೃತಿಯಲ್ಲಿ ಬಲಿಷ್ಠನೇ.' ಎನ್ನುತ್ತಾರೆ. ಅವರ ಸನ್ನಿಧಿಯಲ್ಲಿ ಅನೇಕರು ಶಾಂತಿಯನ್ನು ಪಡೆಯುತ್ತಿದ್ದುದರ ಚಿತ್ರಗಳನ್ನು ನೀಡಿದ್ದಾರೆ. ಮಹರ್ಷಿ ಪರಂಪರೆಯ ಮುಂದುವರಿಕೆಯಾಗಿ ವಾಸ್ತವ ಜಗತ್ತಿನಲ್ಲೂ ಯಶಸ್ವಿ ವ್ಯಕ್ತಿಯಾಗಿದ್ದು ವರ್ಷದಲ್ಲಿ ಮೂರು ನಾಲ್ಕು ತಿಂಗಳುಗಳನ್ನು ರಮಣರ ಒಡನಾಟದಲ್ಲಿ ಕಳೆಯುತ್ತಿದ್ದ ಯೋಗಿ ರಾಮಯ್ಯನವರ ಬಗ್ಗೆ ವಿವರಿಸುತ್ತಾರೆ. ಇವರ ಜತೆಗಿನ ಧ್ಯಾನದಲ್ಲೂ ತನ್ನೊಳಗೆ ನಿಧಾನವಾಗಿ ಶಾಂತಿ ಇಳಿಯುತ್ತಿರುವಂತಹ ಅನುಭವವಾಗುತ್ತದೆ ಎಂಬುದನ್ನು ಕಂಡುಕೊಳ್ಳುತ್ತಾರೆ. ರಮಣರ ಸನ್ನಿಧಿಯಲ್ಲಿ ಪಡೆದ ವಿಶ್ವಪ್ರಜ್ಞೆಯ ಅನುಭವವನ್ನೂ, ಆ ವಿಸ್ತೃತ ಸತ್ಯದ ಹಲವು ಸೆಳಕುಗಳನ್ನು ಕೊನೆಯಲ್ಲಿ ನೀಡಿದ್ದಾರೆ.

ಅನುವಾದ ಸೊಗಸಾಗಿದೆ. ಕೆಲವು ಪದಗಳ ಆಯ್ಕೆ ತಪ್ಪೇನೋ ಅನ್ನಿಸುತ್ತದೆ. ಉದಾಹರಣೆಗೆ ಜ್ಯೋತಿಷ್ಯದ ಪರಿಭಾಷೆಯಲ್ಲಿ ಇಂಗ್ಲಿಷಿನ ಸ್ಟಾರ್ ಕನ್ನಡದಲ್ಲಿ ಗ್ರಹವಾಗಬೇಕು. ('ವಾಟ್ ದಿ ಸ್ಟಾರ್ಸ್ ಪೋರ್‌ಟೆಲ್' ಕನ್ನಡದಲ್ಲಿ 'ನಿಮ್ಮ ಗ್ರಹಗತಿ' ಆಗುತ್ತದೆ.) ಕನ್ನಡದ ಪದಗಳೂ ತೊಡಕನ್ನು ಉಂಟು ಮಾಡುತ್ತವೆ. ತಿಳಿವು ಅರಿವು ಒಂದೇ ಆದಮೇಲೆ, ತಿಳಿವಳಿಕೆ ಅರಿವಳಿಕೆಗಳು ಬೇರೆ ಏಕಾಗಬೇಕು? ಹೀಗಾಗಿ, ಮೂಲದ 'But whatever I am doing I never fail to become gradually aware of the mysterious atmosphere of the place, of the benign radiations which steadily percolate into my brain (p.201)' ಎಂಬ ವಾಕ್ಯ ಪುಟ ೩೭೨ರಲ್ಲಿ 'ಆದರೆ ನಾನು ಏನೇ ಮಾಡುತ್ತಿದ್ದರೂ, ಆ ಸ್ಥಳದ ಮಹಾತ್ಮೆಯ ಬಗ್ಗೆ ನನ್ನಲ್ಲಿ ಅರಿವಳಿಕೆ ಮೂಡುತ್ತಿದ್ದುದಂತೂ ನಿಜ. ಅಲ್ಲಿನ ಪ್ರಭಾವಶಾಲಿ ವಿಕಿರಣಗಳು ನನ್ನನ್ನು ಗಾಢವಾಗಿ ಪ್ರಭಾವಿಸುತ್ತಿದ್ದವು.' ಎಂದಾಗಿದೆ. ಇಂಗ್ಲಿಷ್ ಮುದ್ರಣದಲ್ಲಿರುವ ಚಿತ್ರಗಳನ್ನು ಇಲ್ಲೂ ಬಳಸಿದ್ದರೆ ಚೆನ್ನಿತ್ತು. ಪುಸ್ತಕವನ್ನು ಸುಂದರವಾಗಿ ಕಡಿಮೆ ಬೆಲೆಯಲ್ಲಿ ಹೊರತಂದ ಪ್ರಕಾಶಕರಿಗೆ ಧನ್ಯವಾದಗಳು.

*ಡಾ. ಹೆಚ್. ಪಾಂಡುರಂಗ ವಿಠಲ* ❖

# ಇಂದ್ರ ಮತ್ತು ಪ್ರಹ್ಲಾದ

ಕಥೆ: ರೇವತಿ ಚಿತ್ರ : ಶಂಕರ್

**1** ಇಂದ್ರನ ಆಸ್ಥಾನದಲ್ಲಿ ಒಂದು ದಿನ...




**2** ಬೃಹಸ್ಪತಿಯ ಆಶ್ರಮ...




**3**



4

ಹೌದೆ?

ಸ್ವಾಮಿ, ಇದು ನಿಜಕ್ಕೂ ಆಶ್ಚರ್ಯದ ಸಂಗತಿ !

ವರದ ಬಲದಿಂದ ಹಾಗೂ ಪರಾಕ್ರಮದಿಂದ ಅಧಿಕಾರವನ್ನು ಕಿತ್ತುಕೊಳ್ಳುವುದು ಅಸುರರ ಮಾರ್ಗ. ಆದರೆ ಯೋಗ್ಯರಿಗೆ ಅದು ಸಹಜವಾಗಿಯೇ ಬಂದೊದಗುವುದು.

ಮಹಾವಿಷ್ಣುವಿನ ಮೇಲಿರುವ ಭಕ್ತಿಯಿಂದ, ಶೀಲದಿಂದ ಕೂಡಿದ ಜೀವನದಿಂದ ಪ್ರಹ್ಲಾದ ಅಸುರರ ಕುಲದಲ್ಲಿ ಹುಟ್ಟಿದರೂ, ಅವನಿಗೆ ಮೂರುಲೋಕಗಳ ಅಧಿಕಾರ ಬಂದೊದಗಿದೆ.

5

ಭಕ್ತನೂ ಶೀಲವಂತನೂ ಆದ ಪ್ರಹ್ಲಾದನಿಂದ ಅಧಿಕಾರವನ್ನು ಮರಳಿ ಪಡೆಯುವುದು ಹೇಗೆ?

ಇಂದ್ರ, ನಾನು ಇದಕ್ಕೆ ಪರಿಹಾರ ಸೂಚಿಸಲಾರೆ. ಅಸುರರ ಗುರುವಾದ ಶುಕ್ರಾಚಾರ್ಯರನ್ನು ಕೇಳು. ಅವರು ನಿನಗೆ ಪರಿಹಾರ ನೀಡಬಹುದು.

6

ಇಂದ್ರ, ಪ್ರಹ್ಲಾದನಿಂದ ಮೂರು ಲೋಕಗಳ ಅಧಿಕಾರವನ್ನು ಮರಳಿ ಪಡೆಯುವುದು ಅಸಾಧ್ಯ. ಏಕೆಂದರೆ ಅವನು ಅದಕ್ಕಾಗಿ ಆಸೆಪಟ್ಟವನಲ್ಲ. ದೇವತೆಗಳಿಗೂ ಅವನ ಅಧಿಕಾರವನ್ನು ಕಸಿದುಕೊಳ್ಳಲಾಗದು.

ದೇವಲೋಕದ ಅಧಿಕಾರ ಕಳೆದುಕೊಂಡ ನನ್ನನ್ನು ನೋಡಿ ಎಲ್ಲರೂ ಹಾಸ್ಯ ಮಾಡುವರು. ದಯವಿಟ್ಟು ನನಗೆ ಪರಿಹಾರ ಮಾರ್ಗ ತಿಳಿಸಿಕೊಡಿ.

7

ಆಗಲಿ. ಹೇಗಾದರೂ ಮಾಡಿ ಪ್ರಹ್ಲಾದನಿಂದ ಶೀಲವನ್ನು ತೆಗೆದುಕೋ. ಆಗ ಸತ್ಯ, ಧರ್ಮ ಹಾಗೂ ಇತರ ಐಶ್ವರ್ಯಗಳೆಲ್ಲವೂ ಅವನಿಂದ ಹೊರಟು ಹೋಗುವುವು. ಮತ್ತೆ ನಿನಗೆ ಅಧಿಕಾರ ದೊರೆಯುವುದು.

ನನ್ನೆಲ್ಲ ಪ್ರಯತ್ನಗಳನ್ನೂ ಮಾಡುತ್ತೇನೆ, ಸ್ವಾಮಿ.

ನೀನು ಈ ರೂಪದಿಂದ ಹೋಗಬೇಡ. ಬ್ರಾಹ್ಮಣ ಹುಡುಗನ ವೇಷದಲ್ಲಿ ಹೋಗು.

**8**

ಓ ವಟುಗಳೆ! ಸ್ವಾಗತ. ವೇದಪಾರಂಗತರಾದ ನಿಮಗೆ ನನ್ನಿಂದ ಏನಾಗಬೇಕು, ಹೇಳಿ.




**9**

ಮೊದಲು ನನ್ನ ಪ್ರಶ್ನೆಗೆ ಉತ್ತರ ನೀಡು. ಸೇನೆಯ ಬಲದಿಂದ ಎಂದಿಗೂ ಗೆಲ್ಲಲಾಗದ ಮೂರು ಲೋಕಗಳ ಒಡೆತನ ನಿನಗೆ ಹೇಗೆ ಲಭಿಸಿತು?



ನಿಮಗೆ ತಿಳಿಯದೆ? ನಾನು ಬ್ರಾಹ್ಮಣರನ್ನು ಅಲಕ್ಷ್ಯ ಮಾಡಲಾರೆ, ಅವರನ್ನು ನಿಂದಿಸಲಾರೆ. ಅವರ ಉಪದೇಶಕ್ಕೆ ಅನುಸಾರವಾಗಿ ನಾನು ಆಳ್ವಿಕೆ ನಡೆಸುತ್ತೇನೆ; ಅವರನ್ನು ಗೌರವಿಸುತ್ತೇನೆ. ಇದರಿಂದ ನನ್ನಲ್ಲಿ ಶೀಲದೇವತೆ ಮನೆ ಮಾಡಿದ್ದಾಳೆ. ಈ ಕಾರಣದಿಂದ ನನಗೆ ಮೂರುಲೋಕಗಳ ಅಧಿಕಾರ ಬಂತು. ನನ್ನ ಉನ್ನತಿಗೆ ಅದೇ ಕಾರಣ.

**10**

ಪ್ರಹ್ಲಾದನಿಗೆ ಬ್ರಾಹ್ಮಣಕುಮಾರನ ಜ್ಞಾನದ ಹಸಿವನ್ನು ಕಂಡು ಆನಂದವಾಯಿತು. ಅವನಿಗೆ ಏನಾದರೂ ಉಡುಗೊರೆ ಕೊಡುವ ಬಯಕೆ ಪ್ರಹ್ಲಾದನಿಗುಂಟಾಯಿತು.




ಓ ರಾಜ, ನಿನ್ನಲ್ಲಿ ಅತ್ಯುತ್ತಮವಾದುದನ್ನೇ ನನಗೆ ನೀಡು. ನನಗೆ ನಿನ್ನ ಶೀಲವನ್ನು ನೀಡಬಲ್ಲೆಯಾ?

**11**

ಪ್ರಹ್ಲಾದ ಆಶ್ಚರ್ಯದಿಂದ ಬ್ರಾಹ್ಮಣಕುಮಾರನತ್ತ ನೋಡಿದ.




ಇಲ್ಲ, ಬ್ರಾಹ್ಮಣೋತ್ತಮ. ನನ್ನ ಜೀವನದುದ್ದಕ್ಕೂ ಬೆಳೆಸಿಕೊಂಡು ಬಂದ ಶೀಲವನ್ನು ಕಾರ್ಯರೂಪಕ್ಕೆ ತರಲು ಇದು ಒಂದು ಒಳ್ಳೆಯ ಪರೀಕ್ಷೆ. ನಾನು ನನ್ನ ಮಾತಿನಿಂದ ಹಿಂದಕ್ಕೆ ಸರಿಯಲಾರೆ.

12 ಹಾಗಿದ್ದರೆ ನಾನು ಕೇಳಿದ್ದನ್ನು ಕೊಡುತ್ತೀಯಾ?



ಹೌದು, ನಾನು ನನ್ನ ಶೀಲವನ್ನು ನಿನಗೆ ನೀಡುತ್ತಿದ್ದೇನೆ.

13 ಬ್ರಾಹ್ಮಣಕುಮಾರನ ವೇಷದ ಇಂದ್ರ, ಉಡುಗೊರೆ ಪಡೆದ ಕೂಡಲೇ ಅಲ್ಲಿಂದ ಹೊರಟುಹೋದ. ಅವನು ಹೋದಕೂಡಲೇ ಐದು ಮಂದಿ ದೇವತೆಗಳು ಪ್ರಹ್ಲಾದನ ದೇಹದಿಂದ ಹೊರಬಂದರು.

14 ಆ ದೇವತೆಗಳು ಒಬ್ಬೊಬ್ಬರಾಗಿ ಪ್ರಹ್ಲಾದನನ್ನು ತ್ಯಜಿಸಿ ಹೊರಟುಹೋದರು.



ಪ್ರಹ್ಲಾದ, ನಾನು ಧರ್ಮದ ದೇವತೆ. ನಾನು ಹೊರಟೆ.

ನಾನು ಸದಾಚಾರದ ದೇವತೆ. ಇದೋ ನಾನೂ ಹೊರಟೆ.

ನಾನು ಸತ್ಯದ ದೇವತೆ. ಈಗಲೇ ಹೊರಟೆ.

ನಾನೂ ಬಲದ ದೇವತೆ. ನಾನೂ ಹೊರಟೆ.

14 ಕೊನೆಗೆ ಲಕ್ಷ್ಮಿ ಹೊರಡುವ ಮೊದಲು ಪ್ರಹ್ಲಾದನಿಗೆ ಹೇಳಿದಳು...

ಸರಿ, ನಾನಿನ್ನು ಹೊರಡುತ್ತೇನೆ.



ಪ್ರಹ್ಲಾದ, ಶೀಲದೇವತೆ ಹೊರಟು ಹೋದ ಸ್ಥಳದಲ್ಲಿ ನಾವು ಐವರೂ ನಿಲ್ಲಲಾರೆವು.

ಅಮ್ಮಾ, ನೀವೆಲ್ಲರೂ ಅಗಲಲು ಕಾರಣವಾದ ಶೀಲದೇವತೆಯನ್ನು ನನ್ನಿಂದ ಬೇಡಿದ ಆ ಹುಡುಗನಾರು?

ಅವನು ಇಂದ್ರ. ಬ್ರಾಹ್ಮಣನ ವೇಷ ಧರಿಸಿ ಅವನು ಬಂದಿದ್ದ.

14 ಪ್ರಹ್ಲಾದನಿಂದ ಎಲ್ಲ ಶಕ್ತಿಗಳೂ ಹೊರಟು ಹೋದ ನಂತರ ಪ್ರಹ್ಲಾದ ನಿಧಾನವಾಗಿ ಆಲೋಚಿಸಿದ...

ಶೀಲದೇವತೆಯ ಕೈಯಲ್ಲಿ ಅಷ್ಟೊಂದು ದೇವತೆಗಳಿದ್ದಾರೆಯೆ? ಶೀಲವಿಲ್ಲದೆ ಏನೊಂದು ನಡೆಯದು. ಏನೇ ಇರಲಿ, ಇಲ್ಲಿಯ ತನಕ ಆಚರಿಸಿಕೊಂಡು ಬಂದ ಶೀಲವನ್ನೇ ನಾನು ದಾನವಾಗಿ ನೀಡಿದೆ. ಮತ್ತೆ ಅದನ್ನು ಸಂಪಾದಿಸುವುದನ್ನು ನನ್ನಿಂದ ಯಾರಿಗೂ ತಡೆಯಲಾಗದು.



## ಸುದ್ದಿ ಸಂಚಯ






# ಮೈಸೂರು ಆಶ್ರಮದಲ್ಲಿ 'ಸ್ವಾಮಿ ವಿಜ್ಞಾನಾನಂದ ಸಾಧು ನಿವಾಸ'ದ ಉದ್ಘಾಟನೆ

**ಮೈ**ಸೂರು ರಾಮಕೃಷ್ಣ ಆಶ್ರಮದಲ್ಲಿ 'ಸ್ವಾಮಿ ವಿಜ್ಞಾನಾನಂದ ಸಾಧು ನಿವಾಸ'ದ ಉದ್ಘಾಟನೆಯು ಫೆಬ್ರವರಿ ೩ ರಂದು ಉದ್ಘಾಟಿಸಲ್ಪಟ್ಟಿತು. ರಾಮಕೃಷ್ಣ ಮಹಾಸಂಘದ ಪ್ರಧಾನ ಕಾರ್ಯದರ್ಶಿಗಳಾದ ಪೂಜ್ಯ ಸ್ವಾಮಿ ಸುಹಿತಾನಂದಜಿ ಮಹಾರಾಜ್ ಅವರು ಉದ್ಘಾಟನೆಯನ್ನು ನೆರವೇರಿಸಿದರು. ಮೈಸೂರು ಆಶ್ರಮದ ಹಿರಿಯ ಸಂನ್ಯಾಸಿ ಸ್ವಾಮಿ ಸುರೇಶಾನಂದಜಿ ಮಹಾರಾಜ್ ಅವರ ದಿವ್ಯ ಸಾನ್ನಿಧ್ಯ ದಲ್ಲಿ ಈ ಕಾರ್ಯಕ್ರಮ ನಡೆಯಿತು. ರಾಮಕೃಷ್ಣ ಆಶ್ರಮದ ವಿವಿಧ ಶಾಖಾ ಕೇಂದ್ರಗಳಿಂದ ಬಂದಿದ್ದ ಸುಮಾರು ೬೦ ಮಂದಿ ಸಾಧು, ಬ್ರಹ್ಮಚಾರಿಗಳು ಉಪಸ್ಥಿತರಿದ್ದರು. ಬೆಳಿಗ್ಗೆ ಆಶ್ರಮದ ದೇವಾಲಯದಲ್ಲಿ ವಿಶೇಷ ಪೂಜೆ, ಹೊಸ 'ಸಾಧುನಿವಾಸ' ಕಟ್ಟಡದಲ್ಲಿ ಹೋಮ ನಡೆಯಿತು.

ಉದ್ಘಾಟನೆಯ ಬಳಿಕ ಸಭಾಂಗಣದಲ್ಲಿ ಸಭಾಕಾರ್ಯಕ್ರಮ ನಡೆಯಿತು. ಭಜನೆ, ಶಾಂತಿಮಂತ್ರಗಳ ಬಳಿಕ ಮೈಸೂರು ಆಶ್ರಮದ ಅಧ್ಯಕ್ಷರಾದ ಸ್ವಾಮಿ ಮುಕ್ತಿದಾನಂದಜಿ 'ಸಾಧು ನಿವಾಸ'ದ ಸಂಕ್ಷಿಪ್ತ ವಿವರಣೆ ಹಾಗೂ ವರದಿಯನ್ನು ನೀಡಿ ಪ್ರಸ್ತಾವನಾ ಭಾಷಣ ಮಾಡಿದರು. ಮೈಸೂರು ಆಶ್ರಮದಲ್ಲಿ ದೀರ್ಘಕಾಲ ಸೇವೆ ಸಲ್ಲಿಸಿದ ಸ್ವಾಮಿ ಸುರೇಶಾನಂದಜಿ ಹಾಗೂ ಮುಖ್ಯ ಅತಿಥಿಗಳಾಗಿ ಆಗಮಿಸಿದ ಸ್ವಾಮಿ ಸುಹಿತಾನಂದಜಿಯವರನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು. ಅನಂತರ ಸ್ವಾಮಿ ರಾಘವೇಶಾನಂದಜಿ, ಸ್ವಾಮಿ ಜಗದಾತ್ಮಾನಂದಜಿ, ಸ್ವಾಮಿ ಆತ್ಮವಿದಾನಂದಜಿ ಹಾಗೂ ಸ್ವಾಮಿ ಜಿತಕಾಮಾನಂದಜಿ ವಿಶೇಷ ಭಾಷಣ ಮಾಡಿದರು. ಬಳಿಕ 'ಸಾಧು ನಿವಾಸ'ದ ನಿರ್ಮಾಣ ಕಾರ್ಯದಲ್ಲಿ ನೆರವಾದ ದಾನಿಗಳು, ತಾಂತ್ರಿಕ ತಜ್ಞರು ಹಾಗೂ ವಿವಿಧ ನೆರವು ನೀಡಿದ ಮಹನೀಯರುಗಳಿಗೆ ವಿಶೇಷ ಸನ್ಮಾನ ಮಾಡಲಾಯಿತು. ಕೊನೆಯಲ್ಲಿ ಸ್ವಾಮಿ ಸುಹಿತಾನಂದಜಿ ಮಾತನಾಡುತ್ತ, ''ಮೈಸೂರು ಭವಿಷ್ಯದಲ್ಲಿ ರಾಮಕೃಷ್ಣ ಮಹಾಸಂಘದ ಒಂದು ಪ್ರಧಾನ ಕೇಂದ್ರವಾಗಲಿದೆ ಎಂಬ ಸ್ವಾಮಿ ವಿವೇಕಾನಂದ ಭವಿಷ್ಯವಾಣಿ ಇಂದು ನಿಜವಾಗಿದೆ'' ಎಂದರು. ವಿವಿಧ ಪ್ರದೇಶಗಳಿಂದ ಬಂದ ಭಕ್ತರು, ಸ್ವಯಂಸೇವಕರು ಹಾಗೂ ಗಣ್ಯ ಅತಿಥಿಗಳು ಸೇರಿ ಸುಮಾರು ೧೦೦೦ ಮಂದಿ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ❖

# ಚಳ್ಳಕೆರೆ ಶ್ರೀ ಶಾರದಾಶ್ರಮ ದೇವಸ್ಥಾನ ಉದ್ಘಾಟನೆ

**ಕ**ರ್ನಾಟಕದ ರಾಮಕೃಷ್ಣ ವಿವೇಕಾನಂದ ಭಾವಪ್ರಚಾರ ಪರಿಷತ್ತಿನ ಸದಸ್ಯ ಸಂಸ್ಥೆಗಳಲ್ಲಿ ಒಂದಾದ ಚಳ್ಳಕೆರೆಯ ಶ್ರೀ ಶಾರದಾಶ್ರಮವು ತಾನು ನೂತನವಾಗಿ ನಿರ್ಮಾಣ ಮಾಡಿದ ದೇವಸ್ಥಾನದ ಉದ್ಘಾಟನೆಯನ್ನು ಜನವರಿ ೨೫, ೨೬ ಮತ್ತು ೨೭ ರಂದು ಆಚರಿಸಿತು. ಆ. ೨೫ ರಂದು ಶ್ರೀ ಶ್ರೀ ಚಂಡಿಕಾ ಹೋಮವನ್ನು ನಡೆಸಲಾಯಿತು. ಆ. ೨೬ ರಂದು ಪರಮಪೂಜ್ಯ ಸ್ವಾಮಿ ರಾಘವೇಶಾನಂದಜೀ ಮಹಾರಾಜ್‌ರವರು ಮಂದಿರ ಪ್ರತಿಷ್ಠಾಪನೆಯನ್ನು ನಡೆಸಿಕೊಟ್ಟರು. ಅಂದು ಸಭಾ ಕಾರ್ಯಕ್ರಮದಲ್ಲಿ ಪರಮಪೂಜ್ಯ ಸ್ವಾಮಿ ಮುಕ್ತಿದಾನಂದಜೀ ಮಹಾರಾಜ್‌ರವರು ಕಥಾ ಚಿಂತನ ಮನೋ ಮಂಥನ ಎಂಬ ಕಥೆಗಳ ಸಂಕಲನವನ್ನು ಬಿಡುಗಡೆಗೊಳಿಸಿದರು. ಅಂದು ಬೆಂಗಳೂರು, ಮೈಸೂರು, ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ ಹಾಗೂ ಇತರ ಕಡೆಗಳಿಂದ ಭಕ್ತರು ಆಗಮಿಸಿ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಜ.೨೭ರಂದು ಚಿ. ನಿತ್ಯಾನಂದ ಮತ್ತು ಸಂಗಡಿಗರಿಂದ ಜಾಗೋ ಭಾರತ ಕಾರ್ಯಕ್ರಮವನ್ನು ನಡೆಸಲಾಯಿತು. ಒಟ್ಟು ಸುಮಾರು ೨೫ ಸಾಧುಗಳು ಹಾಗೂ ಮಾತಾಜಿಯವರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ❖



Managing Editor : Swami Muktidananda
Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# Mt. Kailash & Manasa Sarovar Yatra




## 14 Days Yatra - Depr. Dates

May 14, 23 June 05, 18, 27
July 04 Aug 06, 15, 24



## Optional : 4 Days

Mukthinath with Pokhara
Jomsom, Manokamana



## Highlights

| | | | | |
|---|---|---|---|---|
| Doctor / Nurse in the Group | Experience of over a decade | Most percentage of satisfied customers | Vegetarian Food | Homa & Pooja facilities at Manasa Sarovar |
| | Avail Rs. 30,000/- subsidy from Karnataka Govt. (Karnataka Citizens only) | Briefing Session at Bangalore | Bangalore Staff will accompany | Assistance in availing Travel Insurance |



# Shri Hansaa Travels

**Recognised by Department of Tourism, Govt. of Karnataka**

# 640, 40th Cross, 8th Block, Jayanagar, Bangalore - 70

☎: 080-26543891 / 26643276 / 0-9341215612 / 9341415612

: hansaatravels@gmail.com : hansaatravels.com

VIVEKA PRABHA (KANNADA MONTHLY)
March 2015, Vol.16, No.03, No. of pages : 44

Registered With Registrar of News Papers Of India under 72356/2000.postal Regn.No.KA/SK/MYS/480/2015-17. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2013-15







# ರಾಮಕೃಷ್ಣ ಮಠ, ನೌರಾ

(ರಾಮಕೃಷ್ಣ ಮಠ, ಬೇಲೂರು ಇದರ ಒಂದು ಶಾಖಾಕೇಂದ್ರ)

Vill. Naora, P.S. - Bangar, Dist. South 24 Parganas Pin- 743 502, West Bengal
Email: rkmathnaora@gmail.com, rkmathnaora@rediffmail.com, www.rkmnaora.org

## ಸ್ವಾಮಿ ತ್ರಿಗುಣಾತೀತಾನಂದಜಿಯವರ 150ನೇ ಜಯಂತಿ ಉತ್ಸವ (2014-2015)

## ನಿವೇದನೆ

ನೌರಾ ರಾಮಕೃಷ್ಣ ಮಠವು ಪಶ್ಚಿಮ ಬಂಗಾಳದ ಬೇಲೂರಿನಲ್ಲಿರುವ ರಾಮಕೃಷ್ಣ ಮಠದ ಒಂದು ಶಾಖಾಕೇಂದ್ರವಾಗಿದೆ. ದಕ್ಷಿಣ 24 ಪರ್ಗಣ ಜಿಲ್ಲೆಯ ಭಂಗರ್ ಬ್ಲಾಕ್‌ನಲ್ಲಿರುವ ಒಂದು ಹಳ್ಳಿ ನೌರಾ. ಭಗವಾನ್ ಶ್ರೀರಾಮಕೃಷ್ಣರ ನೇರ ಸಂನ್ಯಾಸೀ ಶಿಷ್ಯರಾದ ಸ್ವಾಮಿ ತ್ರಿಗುಣಾತೀತಾನಂದಜಿ ಮಹಾರಾಜ್ ಅವರ ಜನನದಿಂದ ಈ ನೆಲ ಪುನೀತವಾಯಿತು.



ರಾಮಕೃಷ್ಣ ಮಠ, ನೌರಾ

ಈ ಶಾಖಾಕೇಂದ್ರ ಆರಂಭಗೊಂಡ ಸಮಯದಿಂದಲೇ ಅದು ಹಲವಾರು ಸೇವಾಕಾರ್ಯಗಳಲ್ಲಿ ನಿರತವಾಗಿದೆ. ಬಡ ಹಾಗೂ ಹಿಂದುಳಿದ ವರ್ಗಗಳ ಉನ್ನತಿಗಾಗಿ ಉಚಿತ ಶಿಕ್ಷಣ ತರಬೇತಿ, ಅನೌಪಚಾರಿಕ ಶಾಲೆಗಳು, ಪರಿಹಾರ ಕಾರ್ಯ, ಶಿಶುಕಲ್ಯಾಣ ಕಾರ್ಯಕ್ರಮ ಹಾಗೂ ಆರೋಗ್ಯ ಮೊದಲಾದ ಕ್ಷೇತ್ರಗಳಲ್ಲಿ ಅದು ಸೇವಾಕಾರ್ಯಗಳನ್ನು ನಡೆಸುತ್ತಿದೆ. ಸ್ವಾಮಿ ತ್ರಿಗುಣಾತೀತಾನಂದರ 150ನೇ ಜಯಂತಿಯ ಈ ಸಂದರ್ಭದಲ್ಲಿ ನಾವು ಒಂದು ವರ್ಷ ಪೂರ್ತಿ (2014-2015) ದಕ್ಷಿಣ 24 ಪರ್ಗಣ ಜಿಲ್ಲೆಯ ಭಂಗರ್ ಬ್ಲಾಕ್ ಹಾಗೂ ಸುತ್ತಮುತ್ತ ವಾಸಿಸುತ್ತಿರುವ ಬಡಜನರ ಕಲ್ಯಾಣಕ್ಕಾಗಿ ವಿವಿಧ ಸೇವಾಕಾರ್ಯ ಯೋಜನೆಗಳನ್ನು ಕೈಗೊಂಡಿರುತ್ತೇವೆ.

ಈ ವರ್ಷ ಪೂರ್ತಿ ನಡೆಯುವ ಈ ಸೇವಾಕಾರ್ಯ ಯೋಜನೆಗಳಿಗೆ ತಗಲುವ ಆರ್ಥಿಕ ವೆಚ್ಚವನ್ನು ಭರಿಸಲು, ಸಾರ್ವಜನಿಕರು, ಹಿತೈಷಿಗಳು ಹಾಗೂ ಭಕ್ತರು ಉದಾರ ಧನಸಹಾಯ ಮಾಡಬೇಕೆಂದು ಈ ಮೂಲಕ ಕಳಕಳಿಯಿಂದ ವಿನಂತಿಸಿಕೊಳ್ಳುತ್ತಿದ್ದೇವೆ.

ಎಲ್ಲ ದೇಣಿಗೆಗಳಿಗೂ ಸೆಕ್ಷನ್ 80ಜಿ ಅನ್ವಯ ತೆರಿಗೆ ವಿನಾಯಿತಿ ಲಭ್ಯವಿರುತ್ತದೆ. ಚೆಕ್ ಅಥವಾ ಡಿ.ಡಿ.ಯನ್ನು

**"Ramkrishna Math, Naora"** ಈ ಹೆಸರಿಗೆ ತೆಗೆದು, ಮೇಲಿನ ನಮ್ಮ ವಿಳಾಸಕ್ಕೆ ಕಳುಹಿಸಬೇಕಾಗಿ ವಿನಂತಿ. ಆನ್‌ಲೈನ್ ಮೂಲಕ ಧನಸಹಾಯ ಮಾಡುವವರಿಗೆ: **Indian Overseas Bank Bodra A/C No. 113801000010949 (IFSC: IOBA0001138) ; State Bank of Inda, Ghatakpukur A/C No. 31606923704 (IFSC : SBIN0010540)**

ಇತಿ ಭಗವತ್ಸೇವೆಯಲ್ಲಿ ನಿಮ್ಮ,
ಸ್ವಾಮಿ ಮುಕ್ತಿಪ್ರದಾನಂದ
ಅಧ್ಯಕ್ಷರು

Printed at mayur graphics,Bangalore